# ಜಂಗಮ

ಡಾ. ಹಿರೆಮಲ್ಲೂರ ಈಶ್ವರನ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಜಂಗಮ

ಡಾ. ಹಿರೇಮಲ್ಲೂರ ಈಶ್ವರನ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**JANGAMA** : By. Dr. Hiremallur Iswaran, York University, Faculty of Arts, 4700 Keele Street, North York, Ontario, Canada, M3J1P3. Published By Prasaranga, Kannada University, Hampi, Vidyaranya, Kamalapura-583 221 First Edition 1996, Pp II+29, Rs 2- 00

ಮಂಟಪಮಾಲೆ ೨೨



ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ಬೆಲೆ : ರೂ. ೨.೦೦

ಡಿ.ಟಿ.ಪಿ ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ರಣ:
ಅಪೂರ್ವ ಆಫ್‌ಸೆಟ್ ಪ್ರಿಂಟರ್‍ಸ್
ಹೊಸಪೇಟೆ

## ಸಂದರ್ಭ

ಅದು ಎಂಟುನೂರು ವರುಷಗಳ ಹಿಂದಿನ ಕಾಲ. ತಮಿಳುನಾಡಿನಲ್ಲಿ, ಶಿವನ ಹೆಸರಿನಲ್ಲಿ, ಶೈವರು ವರ್ಣಾಶ್ರಮ ವ್ಯವಸ್ಥೆಯನ್ನು ಪಾಲಿಸಿಕೊಂಡು, ಶೈವಧರ್ಮವನ್ನು ಮೆರೆದ ಕಾಲ ಹಿಂದೆ ಉಳಿದಿತ್ತು. ಕರ್ನಾಟಕದಲ್ಲಿ ಕಾಪಾಲಿಕರನ್ನು ಬದಿಗಿರಿಸಿ ಕಾಳಾಮುಖರು ಇನ್ನೂ ಅಚ್ಚುಕಟ್ಟಿನಿಂದ ಬ್ರಾಹ್ಮಣರಿಗಿಂತಲೂ ಹೆಚ್ಚಿನ ಬ್ರಾಹ್ಮಣರಾಗಿ ಶಿವನನ್ನು ಪೂಜಿಸಿಕೊಂಡು ಬಂದಿದ್ದರು. ಗುಡಿ ಕಟ್ಟಿ, ವೇದ ಘೋಷಣೆಗಳೊಂದಿಗೆ ಶಿವನ ಮೂರ್ತಿ ಪೂಜೆಯನ್ನು ಮಾಡುತ್ತ ಶಿವಧರ್ಮದ ಹೆಸರಿನಲ್ಲಿ ಶೂದ್ರರನ್ನೂ ಮಹಿಳೆಯರನ್ನೂ ಹತ್ತಿಕ್ಕಿದ್ದರು. ಆ ಕಾಲದಲ್ಲಿ ಶಿವನ ಅವತಾರಿಯಾಗಿ ಬಂದ ಶಂಕರನು ತಾನು ಸಾಧಿಸಬೇಕಾಗಿದ್ದ ಗುರಿಯನ್ನು ಬಿಚ್ಚುಮಾತಿನಲ್ಲಿ ಹೇಳಿದ್ದು ಗಮನಾರ್ಹವಾಗಿದೆ. ವೈದಿಕ ಧರ್ಮ, ತತ್ವ, ಸಮಾಜ ವ್ಯವಸ್ಥೆಯ ಪುನರುಜ್ಜೀವನವಾಗಬೇಕು; ಅದಕ್ಕೆಂದು ಈ ದೇಶದ ಎಂಟು ದಿಕ್ಕಿನಲ್ಲಿ ಎಂಟು ಮಠಗಳನ್ನು ಕಟ್ಟಿ, ವೇದಗಳ ಮೇಲೆ ಭಾಷೆ ಬರೆದು, ನಾಡನ್ನೆಲ್ಲ ಸುತ್ತಿ ಬ್ರಾಹ್ಮಣಧರ್ಮದ, ಅದಕ್ಕೆ ಸೇರಿದ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಬೇಕು.

ಹೀಗೆ ಆಳ್ವಾರರೂ ನಾಯನಾರರೂ ಕಾಪಾಲಿಕರೂ ಕಾಳಾಮುಖರೂ ಜೊತೆಗೆ ಶಂಕರನಂತಹ ಬುದ್ಧಿವಂತರೂ ಪಕ್ಷೀಯತೆಯ ಭೇದಭಾವಗಳಿಂದ ತುಂಬಿದ ಸಮುಚ್ಚಯವಾದದ ನೆರವಿನಿಂದ ವೈಷಮ್ಯದಿಂದ ತುಂಬಿದ ಜಗತ್ತನ್ನು ದಕ್ಷಿಣದ ತಪ್ಪಲುಭೂಮಿಯಲ್ಲಿ ಬೆಳೆಸಿಕೊಂಡು ಬಂದಿದ್ದ ಕಾಲ ಅದು. ಆ ಭೂಮಿ ಸಹನೆ, ತಾಳ್ಮೆ, ಸಹಜೀವನಕ್ಕೆ ಎಂದಿನಿಂದಲೂ ಆಶ್ರಯ ಮಾಡಿಕೊಟ್ಟಿತ್ತು. ಉತ್ತರದಿಂದ ಬಂದಿದ್ದ ದಿಗಂಬರ ಜೈನಧರ್ಮೀಯರಿಗೆ ಆಶ್ರಯವನ್ನಿತ್ತಿದ್ದಿತು. ತಮಿಳುನಾಡಿನಿಂದ ಓಡಿ ಬಂದಿದ್ದ ಆಚಾರ್ಯ ರಾಮಾನುಜರಿಗೆ ಆಶ್ರಯ ಕೊಟ್ಟಿತ್ತು. ಮೂರ್ತಿಭಂಜಕರಾದ

ಮುಸಲ್ಮಾನರನ್ನೂ ಅದು ಬರಮಾಡಿಕೊಂಡಿತ್ತು. ಯಾರೇ ಬರಲಿ, ಮೂರ್ತಿಪೂಜಕರೇ ಆಗಿರಲಿ, ಮೂರ್ತಿಭಂಜಕರೇ ಆಗಿರಲಿ, ಉತ್ತಮವಾದಿಗಳೇ ಆಗಿರಲಿ... ಅವರೊಂದಿಗೆ ಹೊಂದಿಕೊಂಡು, ತುಟಿ ಬಿಚ್ಚದೆ ಸಹಜೀವನ ಮಾಡಿಕೊಂಡು ಬಂದವರು ದಾಕ್ಷಿಣಾತ್ಯರು.

ದಕ್ಷಿಣದ ತಪ್ಪಲುಭೂಮಿಗೆ ಬಂದರೆ ಅಲ್ಲಿನ ಭೂದೃಶ್ಯ ಗುಡಿಗೋಪುರಗಳಿಂದ, ದೇವಾಲಯಗಳಿಂದ, ಮಠಮಾನ್ಯಗಳಿಂದ ಸಾಲುಗಟ್ಟಿ ಬೆಳೆದ ನಕ್ಷತ್ರಪುಂಜದಂತೆ ಕಾಣುತ್ತಿತ್ತು. ಕಾರ್ಲಾದ ಚೈತನ್ಯಗಳಿಂದ ನಿಮ್ಮ ಪ್ರವಾಸವನ್ನು ಆರಂಭಿಸಿರಿ. ಅಜಂತಾ ಎಲ್ಲೋರಾ ಮೇಲೆ ಹಾಯ್ದು ಬನ್ನಿರಿ. ಬದಾಮಿ, ಐಹೊಳೆ, ಪಟ್ಟದಕಲ್ಲುಗಳನ್ನು ಸಂದರ್ಶಿಸಿರಿ. ಅಲ್ಲಿ ಎಡವಿದರೆ ಶಿಲಾಮೂರ್ತಿಗಳ ಮೇಲೆ ಕಾಲಿಟ್ಟ ಅನುಭವ ವೇದ್ಯವಾಗುತ್ತದೆ. ನಡೆದುಕೊಂಡು ಬರುವುದಕ್ಕೂ ಜಾಗ ಮಾಡಿಕೊಡದಂತೆ ದೇವರು, ದೇವತೆಗಳ ತಿಂಥಿಣಿಯಿಂದ ಆ ಜಾಗ ತುಂಬಿಕೊಂಡಿದೆ. ಅವರನ್ನು ಪೂಜಿಸುವ ಜನಕ್ಕೆ ಆಕಾಶವೆ ಅಂಬರ, ಗಿಡಮರಗಳ ನಡುವೆ ಕಟ್ಟಿದ ಗುಡಿಸಲುಗಳೆ ಆಶ್ರಯ, ಕುಡಿಯುವ ನೀರಿಗೆ ನದಿಯೆ ಆಧಾರ. ಅದು ಬತ್ತಿದರೆ ನೆಲ ಅಗಿಯಬೇಕು. ಅದಕ್ಕೆ ಮಹಾಪೂರ ಬಂದರೆ ದಿಗಂಬರವೆ ಮಾಳಿಗೆ.

ಆ ನಾಡಿನಲ್ಲಿ ಆಗ ಎರಡೇ ಜಾತಿ, ಶ್ರೀಮಂತರದೊಂದು, ಬಡವರದೊಂದು. ಆ ಜಾತಿಗಳಿಂದ ತುಂಬಿದ್ದ ದೇಶಗಳು ಪಶ್ಚಿಮ ಹಾಗೂ ಪೂರ್ವವಲಯದಲ್ಲಿ ಆ ಕಾಲದಲ್ಲಿ ಧಾರಾಳವಾಗಿ ಸಿಗುತ್ತಿದ್ದವು. ಈಗ ಶ್ರೀಮಂತ ನಾಡೆಂದು ಹೆಸರಾಗಿರುವ ಇಂಗ್ಲೆಂಡ ದೇಶದಲ್ಲಿ, ಎರಡುನೂರು ವರುಷಗಳ ಹಿಂದೆ ಬಡವರು ತುಂಬಿದ್ದರು. ನಾಗರಿಕತೆಗೆ ಹೆಸರಾದ ಅರಬರ ದೇಶಗಳಲ್ಲಿ, ಚೀನಾ ದೇಶದಲ್ಲಿ ನೂರಕ್ಕೆ ೯೦ ರಷ್ಟು ಜನ ದರಿದ್ರರು. ಬಡತನಕ್ಕೆ ಹೆಸರಾದ ಅವರು ಅನಕ್ಷರಸ್ಥರು, ಅಲ್ಪಾಯುಷಿಗಳು, ಅಧೀನರೂ ಆಗಿದ್ದರು. ಇನ್ನುಳಿದ ಶೇಕಡ ಹತ್ತರಷ್ಟು ಜನ ಶ್ರೀಮಂತರು, ಅಕ್ಷರಸ್ಥರು, ದೀರ್ಘಾಯುಷಿಗಳು, ಪ್ರಭುಗಳು. ಅದಕ್ಕೆಂದೇ ೧೯ನೆಯ ಶತಮಾನದ ಬ್ರಿಟಿಷರ ದೇಶವನ್ನು ವರ್ಣಿಸುತ್ತ ಬೆಂಜೆಮಿನ್ ಡಿಝ್ರೇಲಿ `ಎರಡು ದೇಶಗಳ ಸಿದ್ಧಾಂತ'ವನ್ನು ಪ್ರತಿಪಾದಿಸಿದನು.

ಉಳಿಗಮಾನ್ಯವನ್ನೂ ಅದಕ್ಕೆ ಸಂಬಂಧಿಸಿದ ಮೌಲ್ಯಗಳನ್ನೂ ಸಮರ್ಥಿಸಿಕೊಂಡು ಬಂದ ರಾಷ್ಟ್ರಗಳನ್ನು ಕಾಣುವುದಕ್ಕೆ ಆ ಕಾಲದ ಭಾರತದ ಹೊರಗಿನ ರಾಷ್ಟ್ರಗಳನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ದಕ್ಷಿಣ ವಲಯಕ್ಕೆ ಸೇರಿದ ಈಗಿನ ಕರ್ನಾಟಕದ ಉತ್ತರ ಭಾಗವು ಆ ಕಾಲದಲ್ಲಿ `ಶೂದ್ರರ ನಾಡು' ಎಂದು ಪ್ರಸಿದ್ಧಿಯಾಗಿತ್ತು. ಈಗಲೂ ಕೂಡ ಅಂತಹ ದೃಷ್ಟಿ, ಮನೋಭಾವ ಬೆಳೆದುಬಂದದ್ದನ್ನು ನಾವು ಉಡಿಪಿ, ಶೃಂಗೇರಿಗಳಲ್ಲಿ ಕಾಣುತ್ತೇವೆ. ಅಲ್ಲಿ ಮಠದ ಹೊರಗಡೆ ದನದ ಸೆಗಣಿಯನ್ನು ಸ್ವಚ್ಛಮಾಡುವವರು ಶೂದ್ರರು, ಒಳಗಡೆ ಪೂಜೆ, ಅಧ್ಯಯನ, ಅಧ್ಯಾಪನ ನಡೆಸಿಕೊಂಡು ಬಂದವರು ಬ್ರಾಹ್ಮಣರು.

ಎಂಟನೆಯ ಶತಮಾನದ ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆಯಲ್ಲಿ ಎಲ್ಲಕ್ಕೂ ಮೇಲೆ ಕಾಣಿಸಿಕೊಂಡವರು ಬ್ರಾಹ್ಮಣರು, ಅವರ ಕೆಳಗಡೆ ಚಿಕ್ಕಪುಟ್ಟ ಸಂಸ್ಥಾನಗಳನ್ನು ಕಟ್ಟಿಕೊಂಡು ಬಲದಿಂದಲೂ ಭೂಸ್ವಾಮ್ಯತ್ವದಿಂದಲೂ ಮೆರೆಯುತ್ತಿದ್ದವರು ಅಧಿಕಾರಿಗಳು, ಅವರ ಕೆಳಗಡೆ ವೈಶ್ಯರು, ನಂತರ ಶೂದ್ರರು, ಅವರಿಗಿಂತಲೂ ಕೆಳಗೆ ಇದ್ದವರು ಮಲಿನ ಜಾತಿಯ ಜನರು. ಅವರನ್ನು ಗಾಂಧೀಜಿ `ಹರಿಜನ', `ದೇವರ ಮಕ್ಕಳು' ಎಂದು ಕರೆದರು. ಆದರೆ ಆ ಕಾಲದ ಸಮಾಜಕ್ಕೆ ಅವರು ತಿರಸ್ಕೃತರಾದ ಜನ. ನೋಡಲಿಕ್ಕೆ ಐದು ಗುಂಪುಗಳಲ್ಲಿ ಅವರು ವಿಂಗಡಿತರಾದಂತೆ ಕಾಣಿಸಿಕೊಂಡಿದ್ದರೂ ಅಲ್ಲಿ ಇದ್ದ ಗುಂಪುಗಳು ಎರಡು: ಶ್ರೀಮಂತರದೊಂದು, ಬಡವರದೊಂದು. ಹಳ್ಳಿಗಳಿಂದ ತುಂಬಿದ ಆ ನಾಡಿನಲ್ಲಿ ವಿಪ್ರರೂ ಪ್ರಭುಗಳೂ ಒಂದಾಗಿದ್ದರು. ಪ್ರಾಚೀನ ಕಾಲದಿಂದಲೂ ಬೆಳಸಿಕೊಂಡು ಬಂದ ಒಕ್ಕೂಟ ಅವರದು. ತೋಳಿನ ಬಲದ ಮೇಲೆ ತಮ್ಮ ಅಧಿಕಾರಕ್ಕೆ ಸೇರಿದ ಪ್ರದೇಶವನ್ನು ವಿಸ್ತರಿಸುತ್ತ ಸದಾಕಾಲವೂ ಸಂಗ್ರಾಮದಲ್ಲಿ ತೊಡಗಿದ ಸಂಸ್ಥಾನಿಕರು `ದೊರೆ' `ಪ್ರಭು' `ಮಹಾರಾಜ' `ಸಾಮ್ರಾಟ'ನೆಂಬ ಪ್ರಶಸ್ತಿಸೂಚಕ ಬಿರುದುಗಳನ್ನು ಕಟ್ಟಿಕೊಂಡು ಮೆರೆಯುತ್ತಿದ್ದರು; ಅವರ ಎಡಬಲದಲ್ಲಿ ನಿಂತುಕೊಂಡು `ನೀವೆ ದೊರೆ, ನೀವೆ ದೇವರು' ಎಂದು ಅವರನ್ನು ಪ್ರಶಂಶಿಸುತ್ತ, ಅವರ ಸಾಮ್ರಾಜ್ಯ ವಿಸ್ತರಣೆಯ ಆಕಾಂಕ್ಷೆಗೆ ದೇವರ ರಕ್ಷಣೆಯನ್ನು ಕೊಡುತ್ತ ಧಾರಾಳವಾಗಿ ದಾನ ದತ್ತಿಗಳನ್ನು ಸ್ವೀಕರಿಸುವುದರೊಂದಿಗೆ ದೇವರ ಪೂಜೆ, ಯಜ್ಞಯಾಗಾದಿಗಳನ್ನು ಕೈಕೊಂಡವರು ವಿಪ್ರರು. ಆಗಿನ ಧಾರ್ಮಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಪರಸ್ಪರ ಸಹಕಾರದಿಂದ ನಿಯಂತ್ರಿಸಿಕೊಂಡು ಬಂದವರು ಅವರು. ಉಳಿದವರೆಲ್ಲ ಅವರ ಊಳಿಗಕ್ಕೆ ಸೇರಿದ ಸಾಮಾನ್ಯರು, ಶೂದ್ರರು; ಶೋಷಣೆಯಿಂದ ಪ್ರೇರಿತವಾದ ಆ ವ್ಯವಸ್ಥೆಗೆ ಸೇರಿದ ಸಾಮಾನ್ಯ ಜನರು ಬಹುಸಂಖ್ಯಾತರು. ಹೊರಲಾಗದ ಭಾರವನ್ನು ಹೊತ್ತು ಅವರ ಬೆನ್ನು ಬಾಗಿದ್ದವು. ಮುಖ ಕೆಳಗಿರಿಸಿಕೊಂಡು ಮೇಲಿನ ತರಗತಿಯ ಜನರಿಗೆ ವಿಧೇಯತೆಯನ್ನು ತೋರುತ್ತಿದ್ದ ಅವರ ನಡತೆ ನಿರಾಶಾದಾಯಕವಾಗಿತ್ತು.

ಆದರ್ಶದ ಮಾದರಿಯನ್ನು ದೃಷ್ಟಾಂತಕ್ಕೆಂಬಂತೆ ಎತ್ತಿಕೊಂಡು ಆ ಕಾಲದ ಹಳ್ಳಿಯ ಸಮಗ್ರ ಚಿತ್ರವೊಂದನ್ನು ಈ ಮುಂದಿನಂತೆ ನಿವೇದಿಸಬಹುದಾಗಿದೆ. ಹಳ್ಳಿಯ ನಟ್ಟನಡುವೆ ಇದ್ದ ದೇವಾಲಯವು ಸಂಪತ್ತಿನಿಂದ ತುಂಬಿದ ಧಾರ್ಮಿಕ, ಆರ್ಥಿಕ ಹಾಗೂ ಸಾಮಾಜಿಕ ಸಂಸ್ಥೆಯಾಗಿತ್ತು. ಗರ್ಭಗುಡಿಯಲ್ಲಿರುವ ಶಿಲಾಮೂರ್ತಿ ಶಿವನ ಇಲ್ಲವೆ ವಿಷ್ಣುವಿನ ಪ್ರತೀಕ ಆಗಿರುವುದು. ಅವನು ಬೆಳೆಸಿಕೊಂಡು ಬಂದ ಸಮುಚ್ಚಯವಾದವು ಊಳಿಗಮಾನ್ಯಕ್ಕೆ ಸೇರಿದ್ದು; ಲಿಂಗಭೇದ, ಜಾತಿಭೇದ, ವರ್ಗಭೇದಕ್ಕೆ ಹೆಸರಾದದ್ದು. ಆತನನ್ನು ಪೂಜಿಸುವುದಕ್ಕೆ ಪುರುಷರೆ ಬೇಕು, ಮಹಿಳೆಗೆ ಗರ್ಭಗುಡಿಯಲ್ಲಿ ಬರಲಿಕ್ಕೂ ಆಗದು. ಕಾರಣ? ಋತುಚಕ್ರ. ಮುಟ್ಟಿನ ಹೊಲೆಗೆ ಈಡಾದ ಆಕೆ ಮಂತ್ರಗಳನ್ನು ಪಠಿಸಲಾರಳು, ಓದಲಾರಳು. ಓದಲಿಕ್ಕೆ ಬರುತ್ತಿದ್ದರೂ ತಿಳಿದುಕೊಳ್ಳುವ ಸಾಮರ್ಥ್ಯವಿಲ್ಲ. ಅದಕ್ಕೆಂದೇ ಹುಟ್ಟಿನಿಂದ ಅಜ್ಞಾನಿಯಾದ ಮಹಿಳೆಗೆ ಪಂಚಮವೇದ

ಬರೆಯಲಾಯಿತೆಂದು ಶಂಕರನು ಹೇಳಿದ್ದು. ಶೂದ್ರರೂ ಹಾಗೆಯೆ. ಗರ್ಭಗುಡಿಯವರೆಗೂ ಬರಲಿಕ್ಕೆ ಅವರಿಗೆ ಆಗದು. ದೇವಾಲಯವೆಲ್ಲ ಹೊಲೆಯಾದೀತು. ಹೆಚ್ಚೆಂದರೆ ದೇವಾಲಯದ ಮಹಾದ್ವಾರದ ಹೊರಗೆ ನಿಂತು ಒಳಗೆ ನೋಡುವುದೇ ಅವರಿಗಿರುವ ಅರ್ಹತೆ. ಹೊರಗಿನ ಕಸ ಹೊಡೆಯುವುದು, ಭಕ್ತರು ಊಟ ಮಾಡಿದ ಮೇಲೆ ಎಲೆಯಲ್ಲಿ ಚೆಲ್ಲಿದ ಎಂಜಲ ತಿನ್ನುವುದು ಅವರ ಧರ್ಮ. ಅದಕ್ಕಿಂತಲೂ ಹೆಚ್ಚಿನದನ್ನು ಅಪೇಕ್ಷಿಸಿದರೆ ಅವರಿಗೆ ಮುಂದಿನ ಜೀವನದಲ್ಲಿ ನಾಯಕನರಕ ಕಟ್ಟಿಟ್ಟದ್ದೆ.

ದೀನಬಂಧು, ದಯಾಳು, ಭಕ್ತವತ್ಸಲನೆಂಬ ಅಭಿದಾನಕ್ಕೆ ಪಾತ್ರನಾದವನು ದೇವರು. ಆದರೂ ಅವನು ಮಹಿಳೆಯರಿಗೂ ಶೂದ್ರರಿಗೂ ತೋರುವ ದೃಷ್ಟಿ ಪಕ್ಷಪಾತದಿಂದ ತುಂಬಿದ್ದು, ಆತನು ದರಿದ್ರರ ದೇವರಲ್ಲ, ಶ್ರೀಮಂತರ ರಕ್ಷಕನು. ಪಾದದಿಂದ ಮೊದಲು ಗೊಂಡು ತಲೆಯವರೆಗೂ ಧರಿಸಿರುವ ಅಲಂಕಾರಗಳು, ಆಭರಣಗಳೇ ಮುಂತಾದವು ಆತನು ಶ್ರೀಮಂತರ ಪರವಾಗಿದ್ದನೆಂಬುದನ್ನು ಸೂಚಿಸುತ್ತವೆ. ಅವನು ವೈಭವಪ್ರಿಯನು, ವಜ್ರ, ಚಿನ್ನದ ಒಡವೆಗಳನ್ನು ಮೆಚ್ಚಿಕೊಂಡವನು. ಭಕ್ತರಿಗೆ ನೀಡಿದ ಈ ಮುಂದಿನ ಸಂದೇಶದಲ್ಲಿ ಅವನ ಭಕ್ತಿಪ್ರಿಯತೆ ಸ್ಪಷ್ಟವಾಗಿ ಮೂಡಿಬಂದಿದೆ: ನಾನು ಅಲಂಕಾರಪ್ರಿಯನು. ನನಗೆ ಸುಂದರವಾದ, ಅಲಂಕೃತವಾದ ಮಂದಿರಗಳನ್ನು ಕಟ್ಟಿಸಿಕೊಡಿರಿ. ಧಾರಾಳವಾಗಿ ದಾನದತ್ತಿಗಳನ್ನು ಕೊಡಿರಿ. ಸರ್ವಾರ್ಪಣಾ ಮನೋಭಾವದಿಂದ ನನ್ನನ್ನು ಪೂಜಿಸಿರಿ, ಪ್ರಾರ್ಥಿಸಿರಿ. ನಿಮ್ಮನ್ನು ರಕ್ಷಿಸುತ್ತೇನೆ. ಮುಂದಿನ ಜೀವನದಲ್ಲಿ ನೀವು ಸುಖಿಗಳಾಗಿ ಹುಟ್ಟಿಬರುವಿರಿ: ಭಾಗವತ ಪುರಾಣದಲ್ಲಿ ಸ್ವತಃ ವಿಷ್ಣು ಪರಮಾತ್ಮನು ಹೇಳಿದ್ದು ಹಾಗೆ.

ಆತನ ಪೂಜೆ ಮೂರುಹೊತ್ತು ನಡೆಯುತ್ತಿದೆ. ಗಂಟೆ ಬಾರಿಸುವವರು, ಮದ್ದಳೆ ಬಾರಿಸುವವರು, ಕಹಳೆಗಳನ್ನು ಊದುವವರು, ಸ್ನಾನಕ್ಕಾಗಿ ಎಣ್ಣೆಯನ್ನು ತರುವವರು, ನೃತ್ಯಗಾರ್ತಿಯರು..... ಹೀಗೆ ಆತನ ಸೇವೆಯಲ್ಲಿ ನಿರತರಾದವರು ಶೂದ್ರರು. ಆತನಿಗೆ ಸೇರಿದ ಭೂಮಿಯನ್ನು ಹಸನು ಮಾಡಿ, ಬಿತ್ತಿ ಬೆಳೆದುದನ್ನು ದೇವಸ್ಥಾನಕ್ಕೆ, ಮಹಾಜನರಿಗೆ ಕೊಟ್ಟು ಕೃತಾರ್ಥತೆಯನ್ನು ಪಡೆದೆವೆಂದು ಹೇಳುವವರು ಒಕ್ಕಲು ಮಕ್ಕಳು. ಭೂಮಿಯ ಒಡೆತನ ದೇವರಿಗೂ ಮಹಾಜನರಿಗೂ ಸೇರಿದ್ದು. ಒಕ್ಕಲಿಗರು ಲಾವಣಿದಾರರು. ಭೂಸ್ವಾಮ್ಯತ್ವವನ್ನು ಪಡೆದ ಮಹಾಜನರ ನೆರಳಲ್ಲಿ, ಅವರ ನೆರಳ ನೆರಳಾಗಿ ಬದುಕಿದವರು ಅವರು. ಕೊಟ್ಟಾಗ ಲಾವಣಿ ಹಿಡಿದು ಬದುಕನ್ನು ಹೊರೆಯುವುದಕ್ಕೆ ಮಾತ್ರ ಆಶ್ರಯ, ಇಲ್ಲದಾಗ ಹೊಟ್ಟೆಗೂ ಕೊರತೆ. ಏಕೆಂದರೆ ಆ ನಾಡು ಭೂಸ್ವಾಮ್ಯತ್ವವನ್ನು ಪಡೆದವರದಾಗಿತ್ತು.

ಆ ಪ್ರದೇಶಕ್ಕೆ ದೊರೆಯಾದವನು ತನ್ನ ಸಾಮ್ರಾಜ್ಯದ ವಿಸ್ತಾರಕ್ಕೆಂದು ದಿಗ್ವಿಜಯ ಕೈಕೊಂಡರೆ ದೇವಾಲಯದ ಗಂಟೆ ನಿನದಿಸುತ್ತಿದ್ದವು. ಯಾಗ-ಯಜ್ಞಗಳು ನಡೆಯಬೇಕು, ಪಶುಬಲಿ ಆಗಬೇಕು, ದೇವರಿಗೆ ಅಭಿಷೇಕ ಆಗಬೇಕು. ಮಂತ್ರಗಳನ್ನು ಘೋಷಿಸುತ್ತ

ಗಂಟೆಯ ನಾದದ ಮಧ್ಯೆ ದೊರೆಯ ದಿಗ್ವಿಜಯಕ್ಕೆ ಪ್ರಾರ್ಥಿಸುವ ವಿಪ್ರರಿಂದ ಗರ್ಭಗುಡಿ, ಅದರ ಹತ್ತಿರದ ವಿನ್ಯಾಸವೆಲ್ಲ ತುಂಬಿರುತ್ತಿದ್ದವು. ಮಂತ್ರಗಳಲ್ಲಿ ಅಡಕವಾಗಿದ್ದ ಮಾಟಗಾರಿಕೆ, ಮೋಡಿ ಶಕ್ತಿಗಳು ಅರಸರ ದಿಗ್ವಿಜಯ ಕಾರ್ಯದಲ್ಲಿ ನೆರವಾಗುತ್ತವೆಯೆಂಬ ನಂಬುಗೆಗೆ ಕಾಲು, ಕೈ ಮೂಡಿಬಂದ ಅವಧಿ ಅದು. ದಿಗ್ವಿಜಯಕ್ಕೆ ಹೋಗುವ ಪೂರ್ವದಲ್ಲೂ ಯುದ್ಧ ನಡೆಸಿ ವಿಜಯ ಪಡೆದು ಬಂದಮೇಲೂ ವಿಪ್ರರಿಗೆ ಹಳ್ಳಿಗೆ ಹಳ್ಳಿಯನ್ನೆ ಉಂಬಳಿ ಕೊಡುವ ಪದ್ಧತಿಗೆ ಅನುಗುಣವಾಗಿ ಅರಸನು ಧಾರಾಳವಾಗಿ ದಾನ ಮಾಡುತ್ತಿದ್ದನು. ಹೀಗೆ ದೊರೆ ಮತ್ತು ವಿಪ್ರರು ಪರಸ್ಪರ ಸೇರಿಕೊಂಡು ರಾಜಕೀಯ ವ್ಯವಸ್ಥೆಯನ್ನು, ಧಾರ್ಮಿಕ ವ್ಯವಸ್ಥೆಯನ್ನು ದಕ್ಷತೆಯಿಂದ ನಡೆಸಿಕೊಂಡು ಬಂದಿದ್ದರು.

ವರ್ಣಬದ್ಧವೂ ಜಾತಿಬದ್ಧವೂ ಆದ ಸಾಮಾಜಿಕ ವ್ಯವಸ್ಥೆಯ ಕಟ್ಟುನಿಟ್ಟುಗಳನ್ನು ಜನತೆಯು ಪಾಲಿಸುವಂತೆ ಮಾಡುವುದು ದೊರೆಯ ಕೆಲಸ. ಧರ್ಮ, ದೇವರ ಹೆಸರಿನಲ್ಲಿ ಸಾಮಾಜಿಕ ಅಂತಸ್ತುಗಳಲ್ಲಿ, ಮೌಲ್ಯಗಳಲ್ಲಿ ಯಾವ ಬದಲಾವಣೆಯೂ ಆಗದಂತೆ ನೋಡಿಕೊಳ್ಳುವುದು ವಿಪ್ರರ ಕೆಲಸ. ಆ ಪ್ರಪಂಚದಲ್ಲಿ ಎರಡು ಬಗೆಯ ಸಾಮಾಜಿಕ, ಧಾರ್ಮಿಕ ನ್ಯಾಯ ವ್ಯವಸ್ಥೆಗಳಿದ್ದವು. ಅವುಗಳಲ್ಲಿ ದೊರೆ, ವಿಪ್ರವರ್ಗಕ್ಕೆ ಸೇರಿದ್ದು ಒಂದು, ಇನ್ನುಳಿದವರಿಗೆ ಸೇರಿದ್ದು ಎರಡನೆಯದು. ಒಟ್ಟಿನಲ್ಲಿ ದ್ವಂದ್ವ ನೀತಿ ನ್ಯಾಯಗಳಿಗೆ ಹೆಸರಾದ ಜಗತ್ತು ಅದು.

ಅಂದಿನ ಜಗತ್ತಿನ ವಸ್ತುಸ್ಥಿತಿಯನ್ನು ವಿವರಿಸುವುದಕ್ಕೆ ಇನ್ನೊಂದು ಉದಾಹರಣೆಯನ್ನು ಪ್ರಾಮಾಣಿಕ ಆಧಾರಗಳೊಂದಿಗೆ ಕೊಡಬಹುದಾಗಿದೆ. ಅದು ಈಗಿನ ವಿಜಾಪುರ ಜಿಲ್ಲೆಗೆ ಸೇರಿದ ಹಳ್ಳಿ, ಬಾಗೇವಾಡಿ. ಬಾಗೇವಾಡಿ ಬ್ರಾಹ್ಮಣರ ಹಳ್ಳಿ, ಅದು ಅವರಿಗೆ ದಾನವಾಗಿ ಬಂದ ಅಗ್ರಹಾರ. ಊರಿನ ಭೂಮಿಯ ಒಡೆತನವೆಲ್ಲ ಅವರದು ಮತ್ತು ಅವರ ದೇವರಿಗೆ ಸಂಬಂಧಿಸಿದ್ದು. ಆ ಪ್ರದೇಶವೆಲ್ಲ ದೇವಾಲಯಗಳಿಂದ ತುಂಬಿ ತುಳುಕಾಡುತ್ತಿತ್ತು. ಕಾಳಾಮುಖರಿಗೆ ಸೇರಿದ ಕಲಿದೇವರ ದೇವಾಲಯ, ಕಲ್ಮೇಶ್ವರ, ಸೋಮೇಶ್ವರ, ಶೋಭನೇಶ್ವರ ದೇವಾಲಯಗಳು, ಜೈನರಿಗೆ ಸೇರಿದ ಪಾರ್ಶ್ವನಾಥನ ದೇವಾಲಯ ಮುಂತಾದವುಗಳು ಜನರಿಗೆ ಅಡ್ಡಾಡಲಿಕ್ಕೂ ಆಸ್ಪದ ಕೊಡದಂತೆ ಬೆಳೆದಿದ್ದವು. ಬಾಗೇವಾಡಿಯಲ್ಲಿನ ಬ್ರಾಹ್ಮಣರ ವ್ಯವಸ್ಥೆಗೆಂದು, ರಕ್ಷಣೆಗೆಂದು ರಚಿತವಾದ ಮಹಾಜನರ ಸಂಘದ ಅಧ್ಯಕ್ಷತೆಯನ್ನು ವಹಿಸಿದ ಮಾದಿರಾಜನು ಬ್ರಾಹ್ಮಣರ ಬ್ರಾಹ್ಮಣನಾಗಿದ್ದನು. ಅವನಿಗೆ `ಪುರವರಾಧೀಶ'ನೆಂಬ ಬಿರುದೂ ಇದ್ದಿತು. ಸುತ್ತುವರಿದು ಬೆಳೆದಿದ್ದ ಎಲ್ಲ ಧರ್ಮಗಳೂ ನಡೆಸಿಕೊಂಡು ಬಂದ ಪೂಜೆ, ಯಜ್ಞ, ಪಶುಬಲಿ, ವೈಭವಪೂರ್ಣ ಧಾರ್ಮಿಕ ಪ್ರಕ್ರಿಯೆ ಮತ್ತು ಉತ್ಸವಗಳಿಂದ ತುಂಬಿದ್ದ ಆ ಹಳ್ಳಿಯಲ್ಲಿ ವಿಪ್ರರದೇ ಮೇಲುಗೈ. ಹುಟ್ಟಿನೊಂದಿಗೆ ಬಂದ ಹಕ್ಕು ಬಾಧ್ಯತೆಗಳನ್ನು ರಕ್ಷಿಸಿಕೊಂಡು, ಎರಡು ಬಗೆಯ ಸಾಮಾಜಿಕ, ಆರ್ಥಿಕ ನ್ಯಾಯ ಪದ್ಧತಿಯ ಆಶ್ರಯದಲ್ಲಿ ಭದ್ರವಾಗಿ ಕಟ್ಟಿದ್ದ ಅವರ ಸಮುದಾಯದಲ್ಲಿ ಪವಿತ್ರ ಜಾತಿಗೆ ಸೇರಿದ ವರ್ಗವೊಂದು ಅಪವಿತ್ರ ಜಾತಿಗೆ

ಸೇರಿದ ಇನ್ನೊಂದು ವರ್ಗ ತಲೆಯೆತ್ತಿದ್ದವು.

ಧರ್ಮಗಳ ನಡುವಿನ ಪರಸ್ಪರ ಸ್ಪರ್ಧೆ, ಕಲಹಗಳಿಂದಾಗಿ ಅವುಗಳಿಗೆ ಸೇರಿದ 'ನಂಬುಗೆಗಳ ವ್ಯವಸ್ಥೆ' (belief system) ಅವನತಿ ಸ್ಥಿತಿಯನ್ನನುಭವಿಸುತ್ತಿದ್ದಿತು. ದೇವರ ನೂಕು ನುಗ್ಗಾಟದಿಂದಾಗಿ, ಒಬ್ಬ ದೇವರ ಮೇಲೆ ಇನ್ನೊಬ್ಬ ದೇವರು ನುಗ್ಗಿಕೊಂಡು ಬಂದು, 'ತಾನು ಶ್ರೇಷ್ಠನು' ಎಂಬ ಸ್ಪರ್ಧೆಗೆ ಇಳಿದ ಕಾರಣದಿಂದಾಗಿ ಸಾಮಾನ್ಯ ಜನತೆಗೆ ಧರ್ಮದಲ್ಲಿದ್ದ ನಂಬುಗೆ ಹಿಂಜರಿದಿತ್ತು. ಎಲ್ಲೆಲ್ಲೂ ಲೆಕ್ಕವಿಲ್ಲದಷ್ಟು ದೇವರು; ಗಿಡ ದೇವರು, ಕಲ್ಲು ದೇವರು, ಮೊರಡಿ ದೇವರು, ಮನೆಯಲ್ಲಿರುವ ಭಾಂಡೆ, ಮರ,ಮಣ್ಣಿನ ಕೊಡ - ಎಲ್ಲಾ ದೇವರು. ಹೀಗೆ ಅಸಂಖ್ಯಾತವಾಗಿ ಬೆಳೆದ ದೇವರುಗಳು ಜನರಿಗೆ ಬಂದ ಬೇನೆ,ಬೇಸರಿಕೆಗಳನ್ನು ಕಡಿಮೆ ಮಾಡುವುದೊತ್ತಟ್ಟಿಗಿರಲಿ, ಅವುಗಳನ್ನು ಹೆಚ್ಚಿಸಿಕೊಂಡು ಹೋಗುವುದಕ್ಕೆ ಕಾರಣವಾಗಿದ್ದವು. ಸೆಗಣಿ ದೇವರು, ದನಗಳ ಮೂತ್ರದಲ್ಲಿ ದೇವರು... ನೋಡಿ ನೋಡಿ ಅವರು ಬೇಸತ್ತಿದ್ದರು, ನೈತಿಕ ಪತನವನ್ನು ಅನುಭವಿಸುತ್ತಿದ್ದರು. ನಿಜ ಧರ್ಮವನ್ನು ಕಾಣಬಯಸಿದ ಅವರ ಆಸೆಗೆ ಆ ಕಾಲದ ದೇವರುಗಳು ಕುಠಾರಪ್ರಾಯವಾಗಿದ್ದರು. ಒಟ್ಟಿನಲ್ಲಿ, ಅಂದಿನ ಧಾರ್ಮಿಕ ಪ್ರಪಂಚ ಜನತೆಯನ್ನು ತಪ್ಪು ಮಾರ್ಗದಲ್ಲಿ ಕರೆದೊಯ್ದಿತ್ತು.

ಸಾಮಾಜಿಕ ನಡೆವಳಿಕೆಯು ಕೂಡ ಅದೇ ಬಗೆಯ ಅವನತ ಸ್ಥಿತಿಗೆ ಈಡಾಗಿತ್ತು. ಸ್ಪರ್ಧೆಗೆ ಇಳಿದಿದ್ದ ಉತ್ಕೃಷ್ಟವಾದ, ಹೀನವಾದಗಳು ಎಲ್ಲಾ ಕಡೆಗೆ ಹಬ್ಬಿದ್ದರ ಫಲವಾಗಿ ಸಾಮಾನ್ಯ ಜನತೆ ಅಲ್ಪತೆಯನ್ನೂ ಅಸಮರ್ಥತೆಯನ್ನೂ ಅನುಭವಿಸುತ್ತಿದ್ದರು. ಸಮಾಜ, ಧರ್ಮದೊಂದಿಗೆ ಅನನ್ಯತ್ವವನ್ನು ಕಳೆದುಕೊಂಡ ಅವರು ತಪ್ಪಿದ ದಾರಿಯಲ್ಲಿ ನಡೆದುಕೊಂಡು ಹೊರಟಿದ್ದರು. ಸಾಮಾನ್ಯ ಜನರೂ ಮಹಿಳೆಯರೂ ವಂಚನೆ, ಪಕ್ಷಪಾತಿಗಳಿಂದ ತುಂಬಿದ ಆ ಜಗತ್ತಿನಲ್ಲಿ ತಮ್ಮನ್ನು ಪಾರು ಮಾಡಲು ಆದರ್ಶ ಪ್ರವಾದಿಯು ಬಂದಾನೇನು, ಅವನು ತಮಗೆ ಯಾವಾಗ ಕಂಡಾನು ಎಂಬ ಆಶಯವನ್ನು ಕಣ್ಣಂಚಿನಲ್ಲಿ ತುಂಬಿಕೊಂಡು ಎವೆಯಿಕ್ಕದೆ ಸುತ್ತಣ ಬಾಂದಳದತ್ತ ನೋಡುತ್ತಿದ್ದ ಆ ಸಂದರ್ಭದಲ್ಲಿ ಬಾಗೇವಾಡಿಯ ಮಾದರಸ ಮತ್ತು ಮಾದಲಾಂಬಿಕೆಯರ ಮಗನಾಗಿ ಬಸವಣ್ಣ ಹುಟ್ಟಿಬಂದ.

ಅವನು ಬೆಳೆದುಬಂದ ಪರಿಸರ ಅಗ್ರಹಾರಕ್ಕೆ ಸೇರಿದ್ದು. ಸ್ವಭಾವತಃ ಅವನದು ವಿನಯದ ಸ್ವಭಾವ, ಆದರೂ ಶೀಘ್ರ-ವೇದಿ. ತನಗೆ ಆಗದ್ದನ್ನು ಕಂಡರೆ ತಡೆದುಕೊಳ್ಳುವುದಕ್ಕೆ ಆಗುತ್ತಿರಲಿಲ್ಲ. ಹೀಗಾಗಿ ಆತನ ಸುತ್ತುಮುತ್ತಣ ಪರಿಸರ ಅವನಲ್ಲಿ ತೀವ್ರವಾದ ಪ್ರತಿಕ್ರಿಯೆಗಳನ್ನುಂಟುಮಾಡಿತ್ತು. ಈ ಜನ ಆಚರಿಸುವುದು ನಿಜಧರ್ಮವೆ? ಸಾಂಪ್ರದಾಯಿಕ ಸಂಸ್ಕೃತಿಯ ಹರಿಕಾರರೆಂದು ಹೇಳುವ ವಿಪ್ರಕುಲದವರು ತಮ್ಮ ಕೆಲಸವನ್ನೂ ಜವಾಬುದಾರಿಗಳನ್ನೂ ಸರಿಯಾಗಿ ನಡೆಸಿಕೊಂಡು ಹೋಗುತ್ತಿದ್ದಾರೆಯೆ? ಇವರು ಹೇಳುವುದೊಂದು, ಮಾಡುವುದೊಂದು ಎಂಬುದು ಇಲ್ಲಿ ಸುತ್ತೆಲ್ಲ

ಕಾಣುತ್ತದೆ. ದೇವರೇ ಈ ಎಲ್ಲ ಜನತೆಯ ಸೃಷ್ಟಿಗೆ ಕಾರಣವಾದರೆ ಅವನು ಕೆಲವರನ್ನು ಶ್ರೇಷ್ಠರನ್ನಾಗಿ, ಕೆಲವರನ್ನು ಕನಿಷ್ಠರನ್ನಾಗಿ ಏಕೆ ಹುಟ್ಟಿಸಿದನು? ಉತ್ತಮವಾದ ಇವರಿಗೆ ಎಲ್ಲಿಂದ ಬಂತು?

ಬಸವನ ಜೀವನದಲ್ಲಿ ಅದು ಎಂಟನೆಯ ವರುಷ. ಉಪನಯನ ಕಾಲ ಇಷ್ಟರಲ್ಲಿಯೇ ನಡೆಯುವುದಿದೆ. ಗಾಯತ್ರಿ ಮಂತ್ರದ ಪಠನದ ಮಧ್ಯೆ ಮಿನುಗುತ್ತಿರುವ ಪವಿತ್ರ ಅಗ್ನಿಯನ್ನು ಪೂಜಿಸುತ್ತ ಜನಿವಾರ ಧರಿಸುವ ಸಂದರ್ಭ ಸನ್ನಿಹಿತವಾಗುತ್ತಿದೆ. ಆಗಬೇಕಾದದ್ದು ಆಯಿತು. ಜನಿವಾರದ ಧಾರಣೆಯ ಸಮಾರಂಭವು ಮುಗಿಯಿತು. ಅದರ ಮುಂದಿನ ದಿನಗಳಲ್ಲಿ ಅದಕ್ಕ ಸಂಬಂಧಿಸಿದ ಪ್ರಕ್ರಿಯೆಗಳು ಅವನಲ್ಲಿ ಸಂದೇಹ, ನಿರಾಸೆಗೆ ಈಡುಮಾಡಿದವು. ಅದು ಸಾಲದೆಂಬಂತೆ ಆತನ ತಂದೆ ತಾಯಿಯರೂ ತೀರಿಕೊಂಡರು. ಮುತ್ತಜ್ಜಿಯ ಆಶ್ರಯದಲ್ಲಿ ಬೆಳೆಯುತ್ತಿದ್ದ ಬಸವನು ಮುಂದಿನ ಎಂಟು ವರುಷಗಳನ್ನು ಸಂದೇಹ, ಸಂಘರ್ಷಣೆಗಳ ತಾಕಲಾಟದಲ್ಲಿ ಕಳೆದನು.

ಅಷ್ಟೊತ್ತಿಗೆ ಬಸವನಿಗೆ ಹದಿನಾರು ವರುಷ. ಮಾತಾಪಿತೃಗಳನ್ನು ಕಳೆದುಕೊಂಡು ಮುತ್ತಜ್ಜಿಯ ಮಡಿಲಲ್ಲಿ ಆಶ್ರಯ ಹೊಂದಿದ್ದ ಅವನ ಮನಸ್ಸು ಸುತ್ತಲಿನ ಪರಿಸರದಲ್ಲಿ ತಲೆಯೆತ್ತಿದ್ದ ಸಾಮಾಜಿಕ ವೈಷಮ್ಯಗಳ ಹೊಡೆತಕ್ಕೆ ಸಿಕ್ಕು ಗಾಳಿಯಲ್ಲಿ ಸಿಕ್ಕ ತರಗೆಲೆಯಂತೆ ಹೊಯ್ದಾಡುತ್ತಿತ್ತು. ಏನು ಮಾಡುವುದು? ಯಾರನ್ನು ಆಶ್ರಯಿಸಿಕೊಂಡು ಹೋಗುವುದು? ಯಾರ ನೆರವಿನಿಂದ ಈ ವೈಷಮ್ಯಗಳನ್ನು ಹೊಡೆದು ಹಾಕಲಿಕ್ಕೆ ಆದೀತು? ಅದೇ ಬಗೆಯ ಹಲವಾರು ಪ್ರಶ್ನೆಗಳು ಅವನನ್ನು ಕಾಡುತ್ತಿದ್ದ ಸಮಯದಲ್ಲಿ ಅವನಿಗೆ ಅಲ್ಲಿ ಸಂಗಮದಲ್ಲಿ, .ಕೃಷ್ಣಾ, ಮಲಾಪಹಾರಿ ನದಿಗಳು ಒಂದಾಗುವಲ್ಲಿ, ಈಶಾನ್ಯಮುನಿಗಳು ಕಂಡರು. ಅವರು ಉದಾರಮತಿಗಳಾದ ಕಾಳಾಮುಖ ಆಚಾರ್ಯರು. ಆಗಮಗಳು ತೋರಿದ ಔದಾರ್ಯದ ನೆರವಿನಲ್ಲಿ ಸಾಧನ ಕೈಕೊಂಡ ಮುನಿಗಳು ಧಾರ್ಮಿಕ ಜ್ಞಾನಸಂಪಾದನೆಗೆಂದು ಬಂದ ವಿದ್ಯಾರ್ಥಿಗಳಿಗೆ ಆಶ್ರಯದಾತೃಗಳಾಗಿದ್ದರೆಂಬ ಸುದ್ದಿ ಸುತ್ತಣ ಪ್ರದೇಶದಲ್ಲಿ ಹಬ್ಬಿತ್ತು.

ಒಂದು ದಿನ ಮುಂಜಾನೆ ಯಾರಿಗೂ ಹೇಳದಂತೆ, ಕೇಳದಂತೆ ಅಕ್ಕನಾಗಮ್ಮನೊಂದಿಗೆ ಸಂಗಮಕ್ಷೇತ್ರದಲ್ಲಿ ನೆಲೆಸಿದ್ದ ಈಶಾನ್ಯಮುನಿಗಳನ್ನು ಬಸವಣ್ಣ ಹುಡುಕಿಕೊಂಡು ಬಂದನು. ಮನೆಮಾರನ್ನು ತ್ಯಜಿಸಿ ಮುನಿಯ ದಾರಿಯನ್ನು ಆತನು ಹುಡುಕಿಕೊಂಡು ಬಂದನೆ? ದ್ವಿಜವರ್ಗದವರ ದ್ವಂದ್ವ ನೀತಿಗೆ ಬೇಸತ್ತು ಸಮಾಜಕ್ಕೆ ಬೆನ್ನು ತಿರುಗಿಸಿ ಸಂಗಮಕ್ಕೆ ಬಂದನೆ? ಚಿಕ್ಕಪುಟ್ಟ ದೇವರನ್ನೊಳಗೊಂಡ ಪ್ರಪಂಚಕ್ಕೆ, ಅಲ್ಲಿನ ಧಾರ್ಮಿಕ ನಂಬುಗೆ, ನಡೆವಳಿಕೆಗಳನ್ನು ನೋಡಿ ಜಿಗುಪ್ಸೆಗೊಂಡ ಅವನು ಬಾಗೇವಾಡಿಯಿಂದ ತಲೆಮರೆಸಿಕೊಂಡು ಈಶಾನ್ಯ ಗುರುವಿನ ಕಡೆಗೆ ಬಂದನೆ? ಈ ಪ್ರಶ್ನೆಗಳಿಗೆ 'ಇಲ್ಲ'ವೆಂದೇ ಉತ್ತರ ಹೇಳಬೇಕಾಗುತ್ತದೆ. ಸಾಮಾಜಿಕ ವಿರೋಧಗಳಿಗೆ ಬೆನ್ನು ತಿರುಗಿಸಿ ಹುಟ್ಟಿದ ಊರನ್ನು ತ್ಯಜಿಸಿ ಹೋಗುವ ಸ್ವಭಾವ ಅವನದಾಗಿರಲಿಲ್ಲ. ಅದು ಛಲದಿಂದ,

ಧೈರ್ಯದಿಂದ, ಕ್ರಿಯಾಶೀಲತೆಯಿಂದ ಪ್ರೇರಿತವಾದ ಸ್ವಭಾವ.

ಈಶಾನ್ಯ ಗುರುವಿನ ಬಳಿಯಲ್ಲಿ ಕುಳಿತು ಹನ್ನೆರಡು ವರುಷಗಳವರೆಗೆ ಬಸವಣ್ಣ ಓದಿದ, ಓದಿದ್ದನ್ನು ಅಂತರ್ಗತ ಮಾಡಿಕೊಂಡ, ಅಂತರ್ಗತವಾದ ಅರಿವನ್ನು ಇತರರಿಗೆ ತಿಳಿಸಿಕೊಡಬೇಕೆಂಬ ಅಪೇಕ್ಷೆಯಿಂದ ಪ್ರೇರಿತನಾದ. ಅಲ್ಲಿ ಅವನು ಓದಿದ್ದೇನು? ಕಲಿತಿದ್ದೇನು? ಇತರರಿಗೆ ತಿಳಿಸಿಕೊಡಬೇಕೆಂಬ ಪಾಠಗಳು ಹೇಳುವುದೇನನ್ನು? ಅವುಗಳಿಗೆ ಉತ್ತರ ಅವನೇ ಹೇಳಿದ ಮಾತುಗಳಲ್ಲಿ ಸ್ಪಷ್ಟವಾಗಿದೆ.

ಏಕದೈವವಾದದಲ್ಲಿ ಅವನಿಗಿದ್ದ ನಂಬುಗೆ ಅಚಲವಾದದ್ದು. ಜನಜಂಗುಳಿಗೆ ತಿಳಿಯಬೇಕಾದ ಮೂಲ ಪಾಠ ಅದು. ಅದರ ಬುನಾದಿಯ ಮೇಲೆ ಅವರೆಲ್ಲರನ್ನು ಒಂದುಗೂಡಿಸಲಿಕ್ಕೆ ನೆರವಾಗಬಲ್ಲ ವಾಹಕ ಅದು. ಆ ದೈವತ್ತ್ವವನ್ನು ಅವನು ಇಷ್ಟಲಿಂಗದ ಸಾಂಕೇತಿಕ ರೂಪದಿಂದ ಸಂಕೇತಿಸಿದನು. ಅದು ವಿಶ್ವರೂಪವನ್ನೂ ವಿಶ್ವಮಾನ್ಯ ತತ್ವಗಳನ್ನೂ ಸೂಚಿಸುವ ಸಂಕೇತ.

ಇಷ್ಟಲಿಂಗವು ಪ್ರತಿನಿಧಿಸುವ ತತ್ತ್ವಗಳಲ್ಲಿ ಇವು ಮುಖ್ಯವಾದವು: ಧಾರ್ಮಿಕ, ಸಾಮಾಜಿಕ, ಆರ್ಥಿಕ ಸ್ವಾತಂತ್ರ್ಯ, ಎಲ್ಲರಿಗೂ ಸಮಾನತೆ, ಲಿಂಗ ಭೇದಗಳಿಲ್ಲದ ಸಮಾನತೆ, ಮತ್ತು ಬಂಧುತ್ವ. ಇವು ಇಪ್ಪತ್ತನೆಯ ಶತಮಾನದಲ್ಲಿ ಕಾಣಿಸಿಕೊಳ್ಳಲಿದ್ದ ಜಾಗತಿಕ ಮೌಲ್ಯಗಳು. ಎಂಟುನೂರು ವರುಷಗಳ ಹಿಂದೆ ಅವುಗಳ ಸೃಷ್ಟಿಗೆ, ಅನುಷ್ಠಾನಕ್ಕೆ ಇಷ್ಟಲಿಂಗವು ತನ್ನ ವಾಸಸ್ಥಾನಕ್ಕೆ ಚಿನ್ನದ ಆಭರಣ, ಭೂಮಿಯ ದಾನ - ಯಾವುದೇ ಬಗೆಯ ದಾನವನ್ನು ಬೇಡುವುದಿಲ್ಲ. ನಿಷ್ಕಾಮಕರ್ಮದಿಂದ ತನ್ನನ್ನು ಪೂಜಿಸಬೇಕೆಂದೂ ಕೇಳುವುದಿಲ್ಲ. ದೇಹವನ್ನೇ ದೇವಾಲಯವನ್ನಾಗಿರಿಸಿರಿ. ಕಾಲೇ ಕಂಬ, ಶಿರವೆ ಹೊನ್ನ ಕಳಶವಾಗಲಿ. ಸದಾಚಾರದಿಂದ ದೇಹವನ್ನು ಪವಿತ್ರವನ್ನಾಗಿರಿಸಿ, ಅದರಲ್ಲೂ ಒಳಗೆ ಭಾವಲಿಂಗವನ್ನು ಇಟ್ಟು ಪೂಜಿಸಿರಿ. ಮೇಲಿಂದ ಮೇಲೆ ನೆನಪಿಗೆ ಬರುವಂತೆ ಎದೆಯ ಮೇಲಿರಿಸಿಕೊಂಡು ಲಿಂಗತತ್ತ್ವಕ್ಕೆ ಅನುಸಾರವಾಗಿ ನಡೆದುಕೊಂಡು ಹೋಗಿರಿ. ಆಗ ಇಹವೇ ಸ್ವರ್ಗವಾಗುತ್ತದೆ.

ಲಿಂಗಾಯತನಿಗೆ ಇರುವುದೊಂದೆ ಲೋಕ, ಅದು ನಾವು ಜೀವಿಸಿರುವ ಲೋಕ. ಅದರ ಕೆಳಗೆ, ಮೇಲೆ ಏನೂ ಇಲ್ಲ. ಇದೇ ಲೋಕದಲ್ಲಿ ಒಳ್ಳೆಯ ನಡತೆಯಿಂದ ಸ್ವರ್ಗವನ್ನೂ ಸಾಧಿಸಬಹುದು, ನರಕವನ್ನೂ ಅನುಭವಿಸಬಹುದು. ನೀವು ಬಯಸಿದ ಗುರಿಯನ್ನು ಸಾಧಿಸುವುದಕ್ಕೆ ಈ ಬದುಕೊಂದೇ ಆಶ್ರಯ. ಆಮೇಲೆ? ಶಿವನಿಂದ ಬಂದದ್ದು ಶಿವನಲ್ಲಿ ಸೇರಿ, ಶಿವನಾಗುತ್ತದೆ ಈ ಜೀವ.

ಶಿವಸ್ಥಿತಿಯನ್ನು, ಎಂದರೆ ಲಿಂಗೈಕ್ಯ ಸ್ಥಿತಿಯನ್ನು ಮುಟ್ಟುವುದಕ್ಕೆ ಇರುವ ದಾರಿ ಒಂದೇ ಒಂದು: ಅದು ಶರಣರ ದಾರಿ. ಇಷ್ಟಲಿಂಗವನ್ನೂ ಸಮಾಜವನ್ನೂ ಏಕಕಾಲಕ್ಕೆ ಪೂಜಿಸುತ್ತ ಮೆಲ್ಲಮೆಲ್ಲನೆ, ಕ್ರಮೇಣವಾಗಿ ಏರುತ್ತ ಆ ಸ್ಥಿತಿಯನ್ನು ಮುಟ್ಟಬೇಕೆನ್ನುವುದು

ಅವನ ಚಿಂತನೆ ಆಗಿತ್ತು. ಆ ಸ್ಥಿತಿಯನ್ನು ಏರುವುದಕ್ಕೆ ಆರು ಹಲ್ಲುಗಳನ್ನೊಳಗೊಂಡ ನಿಚ್ಚಣಿಕೆಯ ನೆರವನ್ನು ಪಡೆಯಬೇಕಾಗುವುದೆಂದು ಅವನು ಹೇಳಿದ. ಅದಕ್ಕೆ ಅವನ ಸೋದರಳಿಯ ಚನ್ನಬಸವಣ್ಣನು ಷಟ್‌ಸ್ಥಲ ಮಾರ್ಗವೆಂದು ಹೆಸರಿಟ್ಟು ಕರೆದನು.

ಬಸವಣ್ಣನ ಆದರ್ಶದ ಯೋಜನೆಯಲ್ಲಿ ಧರ್ಮ ಮುಖ್ಯವಾಗಿತ್ತೆ? ಸಮಾಜ ಮುಖ್ಯವಾಗಿತ್ತೇ? ಆತನು ಕೊಡುವ ಉತ್ತರ ಸ್ಪಷ್ಟವಿದೆ. ಧರ್ಮವಲ್ಲ, ಸಮಾಜ. ಆ ಕಾಲದಲ್ಲಿ ಎಲ್ಲೆಲ್ಲೂ ತುಂಬಿದ್ದ, ಪ್ರಚಾರದಲ್ಲಿದ್ದ ಧರ್ಮಗಳ ಗುಂಪಿಗೆ ಇನ್ನೊಂದು ಧರ್ಮವನ್ನು ಸೃಷ್ಟಿಸಿ, ಅದರಲ್ಲಿ ಸೇರಿಸಬೇಕೆಂಬ ವಿಚಾರ ಖಂಡಿತ ಅವನದಾಗಿರಲಿಲ್ಲ. ಸಮಾಜ ಮುಖ್ಯ, ಅದನ್ನು ಸೃಷ್ಟಿಸಿ, ಅದರಲ್ಲೆ ಅಡಗಿಕೊಂಡಿರುವವನು ದೇವನು. ಸಮಾಜದ ಪೂಜೆಯೇ ದೇವರ ಪೂಜೆ, ಆ ಪೂಜೆಯಿಂದ ತನ್ನ ದೇವರು ಸಂತೃಪ್ತನಾಗುವನೆಂಬ ಕಲ್ಪನೆ ಅವನದು. ದೇಹದಲ್ಲಿ ವಾಸಮಾಡಿಕೊಂಡಿರುವ ಆತ್ಮನಲ್ಲಿಯೂ ಅವನು ಹುದುಗಿಕೊಂಡಿರುವ. ನಿಮ್ಮನ್ನೇ ನೀವು ಪೂಜಿಸಿ ದೇವರಾಗಿ ಬದುಕಿರಿ, ದೈವತ್ತ್ವವನ್ನು ಮರೆಯಿರಿ ಎಂಬ ಸಂದೇಶ ಅವನದು. ವ್ಯಕ್ತಿಯಿಂದ ದೇವರನ್ನು ದೂರವಾಗಿರಿಸಿದ್ದ ತನ್ನ ಕಾಲದ ಪ್ರಪಂಚದಲ್ಲಿ ದೇವರನ್ನು ವ್ಯಕ್ತಿಯ ಹತ್ತಿರ ತರಬೇಕೆಂದು ಅಪೇಕ್ಷಿಸಿದವನು ಬಸವಣ್ಣ. ತನ್ನ ಅಪೇಕ್ಷೆಗಳನ್ನು ಜನತೆಗೆ ತಿಳಿಸಿಕೊಡುವ, ಅದು ಆಧರಿಸಿದ ತತ್ತ್ವಗಳನ್ನು ಸಮಾಜಕ್ಕೆ ತಿಳಿಯುವಂತೆ ಹೇಳಿಕೊಡುವ ಜನರು ಎಲ್ಲಿ ಇದ್ದಾರೆ? ಅವರನ್ನು ತಯಾರಿಸುವ ಗರಡೀಮನೆ ಎಲ್ಲಿದೆ? ಅವರನ್ನು ಏನೆಂದು ಕರೆಯುವುದು?

**ಜಂಗಮಭಾವದ ಕಲ್ಪನೆ**

ಮೇಲಿನ ಪ್ರಶ್ನೆಗಳಿಗೆ ಉತ್ತರ ಹುಡುಕುವಲ್ಲಿ ನಿರತನಾಗಿದ್ದ ಬಸವಣ್ಣನಿಗೆ ಸಂಗಮದಲ್ಲಿ ಪಡೆದ ಅನುಭವ ನೆರವಾಗಿ ಬಂದಿತ್ತು. ಇಲ್ಲಿ ಈಶಾನ್ಯಗುರು ಇಲ್ಲವೆ? ಅಲ್ಲಿ ಸಂಗಮದ ಸಮುದಾಯ ಇಲ್ಲವೆ? ಅವರೆಲ್ಲರನ್ನೂ ಒಂದುಗೂಡಿಸಿ ನಡೆಯುವ ಪ್ರಯತ್ನ ಅಲ್ಲಿ ನಡೆದಿಲ್ಲವೆ? ಅತ್ತಿತ್ತ ಸುತ್ತುಮುತ್ತಣ ಸಮುದಾಯದತ್ತ ಮನಸ್ಸನ್ನು ತಿರುಗಿಸಿದ ಬಸವಣ್ಣನಿಗೆ ಕಂಡದ್ದು `ಜಂಗಮ' ಭಾವ. ತರತಮ ಭಾವದಿಂದ ಜಡಸ್ಥಿತಿಗೆ ಇಳಿದಿದ್ದ ಸಮಾಜದ ಚಿತ್ರ ಅವನಿಗೆ ಈ ಮೊದಲು ಪರಿಚಿತವಾಗಿತ್ತು. ದೇವರ ಲೋಕದಲ್ಲಿದ್ದ ಶ್ರೇಣಿ ಭಾವ ಪದ್ಧತಿ ಮರ್ತ್ಯಲೋಕದಲ್ಲಿಯೂ ಕಾಣಿಸಿಕೊಂಡಿದ್ದು ಅವನ ಲಕ್ಷ್ಯದಲ್ಲಿದ್ದಿತು. ಸಣ್ಣದೇವರಿಗೆ ಕೆಳಗಿನ ಸ್ವರ್ಗ, ದೊಡ್ಡ ದೇವರಿಗೆ ಮೇಲಿನ ಸ್ವರ್ಗಸ್ಥಾನ. ಅವರ ಸುಖ ಅಪೇಕ್ಷೆಗಳೂ ಅವರವರ ಸ್ಥಾನಮಾನಗಳನ್ನಾಧರಿಸಿ ರಚಿತವಾದುದನ್ನು ಅವನು ಓದಿ, ಕೇಳಿ ತಿಳಿದುಕೊಂಡಿದ್ದನು. ಮೇಲಿನ ದೇವರುಗಳು ಹೆಚ್ಚು ಸುಖಕರವಾದ ಅಪೇಕ್ಷೆಗಳನ್ನು ಪಡೆದವರು. ಕೆಳಗಿನವರು ಕಡಿಮೆ ತರಗತಿಯ ಇಚ್ಛೆಗಳನ್ನು ಪೂರೈಸಿಕೊಂಡವರೆಂಬ ಪ್ರಮೇಯವನ್ನು ಧರ್ಮಗಳು ಬೆಳೆಸಿಕೊಂಡು ಬಂದುದೂ ಅವನಿಗೆ ಪರಿಚಿತವಾಗಿತ್ತು. ಮೇಲಿನ ಲೋಕದಲ್ಲಿ ದೇವರು ಅನುಭವಿಸುವ

ಜಾತಿ ಪದ್ಧತಿಯನ್ನು ಮರ್ತ್ಯಕ್ಕೆ ಸೇರಿದ ಮಾನವರೂ ಕಟ್ಟಿಕೊಂಡು ಬಂದುದನ್ನೂ ಅವನು ಕಣ್ಣಾರೆ ನೋಡಿದ್ದನು. ಈಗ ಸರ್ವ ಜೀವಿಗಳಲ್ಲಿಯೂ ಸಮಾನಭಾವವನ್ನು ಕಾಣಬೇಕೆಂದೂ, ಸರ್ವಜೀವಿಗಳೂ ಸುಖಿಗಳಾಗಿರಲಿ ಎಂಬ ಪ್ರಾರ್ಥನೆಯನ್ನೂ ಮಾಡುತ್ತಿರುವ ಧರ್ಮಗಳು ತಮ್ಮ ತತ್ತ್ವಗಳನ್ನು ಬಿಟ್ಟು ಉಳಿದ ಎಲ್ಲ ಕೆಲಸವನ್ನೂ ಮಾಡಿಕೊಂಡು ಬರುತ್ತಿರುವುದನ್ನು ನೋಡಿದ ಬಸವಣ್ಣ ಮೇಲೆ-ಕೆಳಗೆ, ಉಚ್ಚ-ನೀಚ, ಮತ್ತು ಪವಿತ್ರ-ಮಲಿನಗಳೆಂಬ ದ್ವಂದ್ವ ಭಾವಗಳಿಂದ ದೂರವಾದ ಸಮಾಜವನ್ನು ನಿರ್ಮೂಲನ ಮಾಡಿ ಅದರ ಸ್ಥಳದಲ್ಲಿ ವಿಶ್ವಮಾನ್ಯವಾದ ತತ್ತ್ವಗಳ ಬುನಾದಿಯ ಮೇಲೆ ಹೊಸ ಸಮಾಜವನ್ನು ಕಟ್ಟಬೇಕೆಂಬ ಆಸೆ ಕಾಡುತ್ತಿದ್ದ ಕಾಲದಲ್ಲಿ ಅವನಿಗೆ ಕಾಣಿಸಿಕೊಂಡದ್ದು `ಜಂಗಮ' ಕಲ್ಪನೆ.

ಲಿಂಗಭೇದಗಳಿಲ್ಲದ ಸಮಾಜ ಅದು, ಶ್ರೇಣಿ ಪದ್ಧತಿಯನ್ನು ಹತ್ತಿಕ್ಕಿ ಅದರ ಸ್ಥಳದಲ್ಲಿ ಸಮಾನತಾ ಭಾವಕ್ಕೆ ಅವಕಾಶ ಮಾಡಿಕೊಟ್ಟ ಸಮಾಜ ಅದು, ಧಾರ್ಮಿಕ, ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯಗಳ ಬುನಾದಿಯ ಮೇಲೆ ರಚಿತವಾಗಿರುವ ಸಮಾಜ ಅದು. ಆ ಸಮಾಜದ ಮೂಲಭೂತ ತತ್ತ್ವಗಳನ್ನು ಜನತೆಗೆ ತಿಳುಹಿಸಿಕೊಡುವ ಹರಿಕಾರರೂ `ಜಂಗಮ'ವೆ.

ಬಸವಣ್ಣನು ತಿಳಿದುಕೊಂಡಂತೆ `ಜಂಗಮ' ಭಾವ ಎರಡು ಅರ್ಥಗಳನ್ನು ಒಳಗೊಂಡಿದೆ. ಮೊದಲನೆಯದು ಸಮಾಜ, ಎರಡನೆಯದು ಸಮಾಜದ ತತ್ತ್ವಗಳನ್ನು ಪ್ರಚುರಗೊಳಿಸುವ ಮತ್ತು ಅನುಷ್ಠಾನದಲ್ಲಿ ತರಲು ಪ್ರಯತ್ನಿಸುವ ಹರಿಕಾರ, ಜಂಗಮ. ಹೀಗೆ ಜಂಗಮವು ಒಂದು ಕಡೆ ಸಮಾಜವನ್ನೂ ಇನ್ನೊಂದು ಕಡೆ ಕ್ರಿಯಾಶೀಲ ವ್ಯಕ್ತಿಯನ್ನೂ ಪ್ರತಿನಿಧಿಸುತ್ತದೆ. ಸಮಾಜ ಮತ್ತು ವ್ಯಕ್ತಿಯನ್ನು ಪ್ರತಿನಿಧಿಸುವ `ಜಂಗಮ' ಭಾವ ಒಂದು ನಾಣ್ಯದ ಎರಡು ಮುಖಗಳನ್ನು ಸೂಚಿಸುತ್ತದೆ. ಅದರಲ್ಲಿ ಯಾವುದು ಮುಖ್ಯ, ಯಾವುದು ಅಲ್ಲ ಎಂದು ಕೇಳುವ ಪ್ರಶ್ನೆಗೆ `ಸಮಾಜ ಮುಖ್ಯ'ವೆಂದೇ ಹೇಳಬೇಕಾಗುತ್ತದೆ. ಆ ಸಮಾಜವೇ ಇಲ್ಲವೆಂದರೆ ಅದರ ನಿಲವು, ಮೌಲ್ಯಗಳನ್ನು ಪ್ರತಿಪಾದಿಸುವ, ತಿಳಿಹೇಳುವ ವ್ಯಕ್ತಿಯ ಪ್ರಶ್ನೆ ಎಲ್ಲಿಂದ ಬಂದೀತು? ಈ ಪ್ರಶ್ನೆಗೆ ಉತ್ತರವನ್ನು ಸೂಚಿಸುವುದಕ್ಕೋ ಎಂಬಂತೆ ಬಸವಣ್ಣನು ತನ್ನ ವಚನಗಳಲ್ಲಿ `ಜಂಗಮ' ಪದವನ್ನು ಕೆಲವು ಕಡೆಗಳಲ್ಲಿ ನಪುಂಸಕಾರ್ಥದಲ್ಲಿಯೂ ಕೆಲವು ಕಡೆ ಪುಲ್ಲಿಂಗಾರ್ಥದಲ್ಲಿಯೂ ಬಳಸಿರುವನು. `ಜಂಗಮದೊಳಗೆ ಲಿಂಗಯ್ಯನಿದ್ದಾನೆ', `ಜಂಗಮಕ್ಕಲ್ಲದೆ ಮಾಡೆನೀಧನವನು', `ಲಿಂಗದ ಬಾಯಿ ಜಂಗಮ', `ಜಂಗಮಮುಖ ಲಿಂಗವಾದ ಕಾರಣ' ಎಂಬ ವಾಕ್ಯಗಳಲ್ಲಿ ಬಳಸಲಾಗಿರುವ `ಜಂಗಮ' ಪದವು ಸಮಾಜವನ್ನು ಸೂಚಿಸುತ್ತದೆಯಲ್ಲದೆ, ಅದು `ಸಮಾಜವೆ ದೇವರು' ಎಂಬ ಪ್ರಮೇಯವನ್ನೂ ಪ್ರಕಟಿಸುತ್ತದೆ.

ಬಸವಣ್ಣನು ಸೃಷ್ಟಿಸಿಕೊಂಡ ಸಮಾಜ ಹಾಗೂ ದೇವರ ಕಲ್ಪನೆ ಮೂರ್ತವಾಗಿದೆ.

ಆತನ ಸಮಾಜದ ಕಲ್ಪನೆ ಕ್ರಿಯಾಶೀಲವೂ ಚೈತನ್ಯಪೂರ್ಣವೂ ಸಮಭಾವವನ್ನೂ ಆಧರಿಸಿ ರಚಿತವಾಗಿದೆ. ಅವನು ರೂಪಿಸಿಕೊಂಡ ಶಿವನ ಭಾವವೂ ಅವೇ ಗುಣಗಳನ್ನು ಪ್ರತಿನಿಧಿಸುತ್ತದೆ. ಜಡಸ್ಥಿತಿಯನ್ನು ಪಡೆದ ದೇವರಿಗೆ ಮತ್ತು ಸಮಾಜಕ್ಕೆ ಅವನು ಯೋಜಿಸಿಕೊಂಡ `ನೀಲನಕ್ಷೆ'ಯಲ್ಲಿ ಸ್ಥಳವಿಲ್ಲವೆನ್ನುವ ಅಭಿಪ್ರಾಯವು ಸ್ಪಷ್ಟವಾಗಿ ಒಡಮೂಡಿದೆ. 'ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಹೇಳಿಕೆಯಲ್ಲಿ ಹುಟ್ಟಿನ ಮೂಲಕ ಹಕ್ಕುಬಾಧ್ಯತೆಗಳನ್ನು ಸಾಧಿಸಿಕೊಂಡು ಬಂದ ಸ್ಥಗಿತ ಸಮಾಜವನ್ನೂ ವ್ಯಕ್ತಿಗಳನ್ನೂ ಅವನು ಅಲ್ಲಗಳೆದಿದ್ದು ಕಂಡುಬರುವುದು. ಅವನು ಬಲವಾಗಿ ಸಮರ್ಥಿಸಿಕೊಂಡು ಬಂದ ಸಿದ್ಧಾಂತಗಳಲ್ಲಿ ಕಾಯಕ ಮತ್ತು ದಾಸೋಹಗಳಿಗೆ ಸಂಬಂಧಿಸಿದ ವಿಚಾರಗಳು ಬಹು ಮುಖ್ಯವಾಗಿವೆ. `ದುಡಿಮೆಯೆ ಪೂಜೆ', `ದಾಸೋಹವೆ ದೇವರು', `ಕಾಯಕವೆ ಕೈಲಾಸ' ವೆಂಬ ಶರಣರ ಉಕ್ತಿಗಳು ಜನಪ್ರಿಯವಾಗುವುದಕ್ಕೆ ಲಿಂಗಾಯತ ಧರ್ಮದಲ್ಲಿ ದುಡಿಮೆ ಮತ್ತು ವಿತರಣಾ ಭಾವಗಳನ್ನು ದೇವತ್ವಕ್ಕೇರಿಸಿದ್ದೆ ಕಾರಣವಾಗಿದೆ.

ಬಸವಣ್ಣನ ಶಿವನಕಲ್ಪನೆ ಕ್ರಿಯಾಶೀಲದ ಮೇಲೆ, ಚೈತನ್ಯಶಕ್ತಿಯಮೇಲೆ ಮೂಡಿಬಂದಿದೆಯೆಂದು ಆಗಲೆ ತಿಳಿಸಲಾಗಿದೆ. ಕ್ರಿಯಾಶೀಲವನ್ನು `ಬೇರೂಫ್' (Beruf) ಎಂಬ ಜರ್ಮನ್ ಶಬ್ದವು ಸೂಚಿಸುತ್ತಿದ್ದು ಈ ಶೀಲವೇ ಜರ್ಮನಿ ದೇಶ ಹಾಗೂ ಪ್ರೊಟೆಸ್ಟಂಟ ಧರ್ಮಕ್ಕೆ ಸೇರಿದ ಇತರ ರಾಷ್ಟ್ರಗಳ ಅಭಿವೃದ್ಧಿಗೆ ಕಾರಣವಾಯಿತೆಂದು ಮ್ಯಾಕ್ಸ್‌ವೇಬರ್ ಎಂಬ ಶ್ರೇಷ್ಠ ಪಂಡಿತರೊಬ್ಬರು ಸೂಚಿಸಿದ್ದುಂಟು. ಧಾರ್ಮಿಕ ಪ್ರಕ್ರಿಯೆ, ಮಂತ್ರ, ತಂತ್ರ, ಯಜ್ಞಯಾಗಾದಿಗಳಿಂದ ವಂಚಿತವಾಗಿದ್ದ ಸಮಾಜವು ಜೈನ ಧರ್ಮದೆಡೆಗೆ, ಬೌದ್ಧಧರ್ಮದತ್ತ ತಿರುಗಿ ಕಾಲಕ್ರಮದಲ್ಲಿ ಅಲ್ಲಿಯೂ ನೆಲಸಿದ್ದ ಜಡಸ್ಥಿತಿಯನ್ನು ಅನುಭವಿಸಿದುದನ್ನು ಅರಿತುಕೊಂಡಿದ್ದ ಬಸವಣ್ಣನು ತನ್ನ ಶಿವನ ಕಲ್ಪನೆಯಲ್ಲಿ ಚೈತನ್ಯದ ಸಂಕೇತವನ್ನು ರೂಪಿಸಿಕೊಂಡುದು ಸಮಾಜದ ಹಿತಚಿಂತನೆಗಾಗಿಯೆ. ಹೀಗಿದ್ದರೂ ಅದರ ಅರ್ಥವನ್ನು ಮಾಡಿಕೊಳ್ಳಲಿಕ್ಕಾಗದ ಅಭ್ಯಾಸಿಗಳು ಲಿಂಗಾಯತನ ದೇವರಲ್ಲಿ ಪುರುಷ-ಪ್ರಕೃತಿ ಅಥವಾ ಶಕ್ತಿ ಭಾವವನ್ನು ಕಂಡದ್ದು ಪ್ರಮಾದವಾಗಿದೆ. ತಾನು ಕಟ್ಟಬಯಸಿದ ಸಮಾಜದಲ್ಲಿ ಇವೆರಡೂ ಗುಣಗಳನ್ನು ಅನುಷ್ಠಾನ ಮಾಡಲೆಂದೇ ಬಸವಣ್ಣನು ಸಮಾಜದಲ್ಲಿ ಜಂಗಮವನ್ನೂ ಜಂಗಮದಲ್ಲಿ ಲಿಂಗಭಾವವನ್ನೂ ತಂದಿರಿಸಿದ್ದು. ಸ್ಥಗಿತವಾದ ಸಮಾಜದಲ್ಲಿ ಚೈತನ್ಯಶಕ್ತಿಯನ್ನು ತುಂಬಿ ಅದರಲ್ಲಿ ಇಹವನ್ನೂ, ಪರವನ್ನೂ ಮೆರೆಯಬೇಕೆಂಬ ಅಪೇಕ್ಷೆಯಿಂದ ಪ್ರೇರಿತನಾದ ಬಸವಣ್ಣನು ಜಂಗಮ ವ್ಯಕ್ತಿಯ ಮೇಲೆ ಅವಲಂಬಿತವಾದದ್ದು ಸಹಜವೂ ಯುಕ್ತಿಯುತವಾದ ಹಂಚಿಕೆಯೂ ಆಗಿದ್ದಿತು.

ಆ ಸಂದರ್ಭದಲ್ಲಿ ಬಸವಣ್ಣನನ್ನು ಒಂದು ವಿಚಾರವು ಕಾಡುತ್ತಿತ್ತೆಂದು ತೋರುತ್ತದೆ. ಗುರು, ಲಿಂಗ, ಜಂಗಮ ಇವರೆಲ್ಲರೂ ಲಿಂಗಾಯತ ಧರ್ಮದ ನಿಯೋಗಿಗಳು. ಆದರೆ ಈ ಮೂವರಲ್ಲಿ ಯಾರು ಹೆಚ್ಚು, ಯಾರು ಕಡಿಮೆ? ಯಾರಿಗೆ

ಹೆಚ್ಚಿನ ಮಹತ್ವ ಕೊಡುವುದು? ಬಸವಣ್ಣನ ವಚನಗಳನ್ನು ಒಟ್ಟಾರೆ ನೋಡಿದರೆ ಅವರೆಲ್ಲರೂ ಒಬ್ಬರಲ್ಲಿ ಇನ್ನೊಬ್ಬರು ಸೇರಿಕೊಂಡಿರುವುದರಿಂದ ಅವರನ್ನು ಪ್ರತ್ಯೇಕಿಸಿ ಅರ್ಥೈಸುವುದು ಸುಲಭವಲ್ಲ. ಒಂದು ವಚನದ ಆಧಾರದ ಮೇಲಿಂದ ಗುರುವಿಗೂ ಇನ್ನೊಂದು ಹೇಳಿಕೆಯ ಮೇಲಿಂದ ಲಿಂಗಕ್ಕೂ ಮತ್ತೊಂದು ಪಾಠದನ್ವಯ ಜಂಗಮಕ್ಕೂ ಅವನು ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಂತೆ ಕಂಡುಬರುತ್ತದೆ. ಅದರ ಮೇಲಿಂದ ಆತನು ತನ್ನ ಮಾತುಗಳನ್ನು ತಾನೇ ವಿರೋಧಿಸಿದವನೆಂದಾಗಲಿ, ವಿರೋಧೋಕ್ತಿಗಳನ್ನು ಹೇಳುವುದೆ ಅವನ ಅಭ್ಯಾಸವಾಗಿತ್ತೆಂದಾಗಲಿ, ಮೂರು ನಿಯೋಗಿಗಳಲ್ಲಿ ಒಬ್ಬನಾದ ಗುರುವಿಗೆ, ಇಲ್ಲವೆ ಲಿಂಗಕ್ಕೆ, ಇಲ್ಲವೆ ಜಂಗಮಕ್ಕೆ ಹೆಚ್ಚಿನ ಮಹತ್ತ್ವವನ್ನು ಕೊಟ್ಟನೆಂಬ ಪ್ರಮೇಯವನ್ನಾಗಲಿ ಸಾಧಿಸುವುದು ತಪ್ಪಾದೀತು. ಬಸವಣ್ಣನೊಬ್ಬನಲ್ಲೆ ಅಲ್ಲ, ಎಲ್ಲ ವಚನಕಾರರಲ್ಲಿಯೂ ಅಂತಹ ವಿರೋಧೋಕ್ತಿಗಳು ನೋಡಲು ಧಾರಾಳವಾಗಿ ದೊರೆಯುತ್ತವೆ. ಹಾಗೆ ಕಂಡುಬರುವುದಕ್ಕೆ ಕಾರಣವೆಂದರೆ ವಚನಕಾರರು ಯಾವ ಸಂದರ್ಭದಲ್ಲಿ ತಮ್ಮ ವಚನವನ್ನು ಹೇಳಿದರು ಎನ್ನುವುದು ತಿಳಿಯದು. ಸಂದರ್ಭಾನುಸಾರವಾಗಿ ಹೇಳಿದ ಮಾತು ಆ ಸಂದರ್ಭದಲ್ಲಿ ಮಾತ್ರ ಸರಿಯಾಗಿ ಕಂಡುಬರುವುದುಂಟು. ಅದೇ ಮಾತನ್ನು ಇನ್ನೊಂದು ಸಂದರ್ಭದಲ್ಲಿ ಪರೀಕ್ಷಿಸಿದಾಗ ಅದು ಅಸಂಗತವಾಗಿ ಕಂಡುಬಂದರೆ ಆಶ್ಚರ್ಯವೇನಿಲ್ಲ. ಆದುದರಿಂದ ಸಂದರ್ಭಕ್ಕೆ ಹೊರತಾಗಿ ಗುರು ಲಿಂಗ ಜಂಗಮದಲ್ಲಿ ಯಾರು ಹೆಚ್ಚಿನವರೆಂದು ಕೇಳುವ ಪ್ರಶ್ನೆಗೆ ಉತ್ತರ ಹುಡುಕಬಯಸಿದವರಿಗೆ ಜಂಗಮ ಹೆಚ್ಚಿನವನೆಂದೂ ಅಥವಾ ಗುರು, ಇಲ್ಲವೆ ಲಿಂಗ ಹೆಚ್ಚಿನದೆಂದೂ ಕಂಡುಬರುವುದು ಸಾಧ್ಯವಿದೆ. ಅದೇ ಸಂದರ್ಭದ ಹಿನ್ನೆಲೆಯಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದ ವಚನಗಳನ್ನು ಒಟ್ಟಾರೆ ನೋಡುವವರಿಗೆ ಸರಿಯಾದ ಅರ್ಥ ದೊರೆಯಬಹುದಾಗಿದೆ.

ಸಾಂಪ್ರದಾಯಿಕ ವಿಚಾರಗಳನ್ನು ಸಹಜವಾಗಿ ಅಂಗೀಕರಿಸುವ ಸ್ವಭಾವವು ಬಸವಣ್ಣನದಾಗಿರಲಿಲ್ಲವೆಂದೇ ಹೇಳಬೇಕು. ಗುರುಭಾವಕ್ಕೆ, ಬ್ರಾಹ್ಮಣ ಸಂಪ್ರದಾಯದಲ್ಲಿದ್ದ ಮಹತ್ವವನ್ನು ಅವನು ಬಲ್ಲನಾದರೂ `ಅಕ್ಷರವೊಂದನ್ನು ಕಲಿಸಿದಾತನು ಗುರು'ವೆಂದು ಹೇಳುವ ಮಟ್ಟಿಗೆ ಅವನು ಹೋಗುತ್ತಿರಲಿಲ್ಲ. ಆದರೂ ಅಕ್ಷರಭ್ಯಾಸವು ಜನಸಾಮಾನ್ಯರಿಗೆ ಇಲ್ಲದ ಆ ಕಾಲದಲ್ಲಿ ಅವರಿಗೆ ತನ್ನ ಹೊಸ ವಿಚಾರಗಳನ್ನು ತಿಳಿಸಿಕೊಡಬಲ್ಲ ನಿಯೋಗಿಯನ್ನು ಗುರುವೆಂದು ಕರೆದ ಅವನು ಆತನಿಗೆ ಮಹತ್ವವನ್ನು ಕೊಟ್ಟಿದ್ದನೆನ್ನುವುದು `ಶಿವಪಥವ ನರಿವಡೆ ಗುರುಪಥವೆ ಮೊದಲು' ಎಂಬ ಆತನ ವಚನವೊಂದರಿಂದ ತಿಳಿದುಬರುತ್ತದೆ. ಬೋಧನೆಯ ಕಾರ್ಯದಲ್ಲಿ ಗುರುವಿಗೆ ಇರುವ ಪ್ರಥಮ ಸ್ಥಾನವನ್ನು ಈ ವಚನವು ಸೂಚಿಸುತ್ತಿದ್ದರೂ `ಜಂಗಮ'ಕ್ಕೆ ಗುರುವಿಗಿಂತಲೂ ಹೆಚ್ಚಿನ ಸ್ಥಾನವನ್ನು ನೀಡಿದ್ದನ್ನು ಇನ್ನುಳಿದ ಆತನ ಈ ಹೇಳಿಕೆಗಳು ಸಂದೇಹಕ್ಕೆ ಇಂಬುಗೊಡದಂತೆ ಸ್ಪಷ್ಟಪಡಿಸುತ್ತವೆ. `ಗುರುವಿನ ಗುರು ಜಂಗಮ', `ಗುರು ಮುನಿದರೆ ಒಂದು ದಿನ ತಾಳುವೆ, ಲಿಂಗ ಮುನಿದರೆ ಅರ್ಧ ದಿನ ತಾಳುವೆ, ಜಂಗಮ ಮುನಿದರೆ ಕ್ಷಣಮಾತ್ರವೂ

ತಾಳಲಾರೆನೆಂದು ಹೇಳುವ ಆತನ ವಚನವನ್ನು ತೌಲನಿಕ ದೃಷ್ಟಿಯಿಂದ ನೋಡಿದಾಗ ಗುರುವಿಗಿಂತಲೂ ಮೇಲಿನ ಸ್ಥಾನವನ್ನು ಜಂಗಮನಿಗೆ ಕೊಟ್ಟಿದ್ದು ವಿಧಿತವಾಗುತ್ತದೆ.

ಲಿಂಗ ಮತ್ತು ಜಂಗಮಕ್ಕೆ ಸಂಬಂಧಿಸಿದ ಸ್ಥಾನದ ಸಮಸ್ಯೆ ಬಂದಾಗ, ಅವರಲ್ಲಿ ಯಾರು ಅಧಿಕರೆನ್ನುವ ಪ್ರಶ್ನೆಗೆ ಉತ್ತರ ಹುಡುಕುವ ಆಹ್ವಾನ ಬಂದಾಗ ನಾವು ಮತ್ತೆ ಅದೇ ತೌಲನಿಕ ವಿಧಾನವನ್ನು (Comparative method) ಕೈಗೆತ್ತಿಕೊಳ್ಳಬೇಕಾಗುತ್ತದೆ. ಈ ಸಂದರ್ಭದಲ್ಲಿ ಹೇಳಬೇಕಾಗಿದ್ದ ಅಭಿಪ್ರಾಯವನ್ನು ಪುನರಾವೃತ್ತಿಗೆ ಈಡುಮಾಡಿದ ಬಸವಣ್ಣನು ತನ್ನ ಈ ಕೆಳಗಿನ ವಚನಗಳಲ್ಲಿ ನಿರ್ದಿಷ್ಟವಾಗಿ ವ್ಯಕ್ತಪಡಿಸಿರುವನು:

``ಜಂಗಮದೊಳಗೆ ಲಿಂಗಯ್ಯ ಸನ್ನಿಹಿತವಪ್ಪ''

``ಜಂಗಮ ತೃಪ್ತಿಯಾದಡೆ ಲಿಂಗಸಂತುಷ್ಟಿ''

``ಲಿಂಗ ಜಂಗಮವೆಂಬೆ, ಜಂಗಮ ಲಿಂಗವೆಂಬೆ''

``ಲಿಂಗ ಜಂಗಮದ ಮರೆಹೊಕ್ಕು ಬದುಕಿದೆನು''

``ಜಂಗಮವೆ ಲಿಂಗವೆಂದು ನಂಬಿದೆ''

ಮೇಲಿನ ವಚನಗಳಲ್ಲಿ ಒಮ್ಮೆ ಅವೆರಡೂ ಭಾವಗಳನ್ನು ಸಮನಾಗಿ ಕಂಡದ್ದೂ ಇನ್ನೊಮ್ಮೆ ಲಿಂಗಕ್ಕಿಂತಲೂ ಹೆಚ್ಚಿನ ಶ್ರೇಯವನ್ನು ಜಂಗಮಕ್ಕೆ ಕೊಟ್ಟಿದ್ದೂ ಕಂಡುಬರುತ್ತದೆ. ಇದಕ್ಕೆ ಕಾರಣ? ಸಮಾಜದಲ್ಲಿ ದೇವರು ಹುದುಗಿಕೊಂಡಿರುವನೆಂಬ ಮೇಲಿನ ಮಾತುಗಳನ್ನು ಹೇಳುವುದಕ್ಕೆ ಪ್ರೇರೇಪಿಸಿವೆ. ಹೀಗೆ ಗುರು ಮತ್ತು ದೇವಭಾವಗಳಿಗೆ ಮಿಕ್ಕಿದ ಪ್ರಾಶಸ್ತ್ಯವನ್ನು ಜಂಗಮಕ್ಕೆ ಬಸವಣ್ಣ ಕೊಟ್ಟಿದ್ದನ್ನು ಐತಿಹಾಸಿಕ ಮತ್ತು ಧಾರ್ಮಿಕ ಗ್ರಂಥಗಳ ಪ್ರಮಾಣಗಳ ಮೇಲಿಂದ, ಅವನ ಜೀವನದ ವೃತ್ತಾಂತಗಳಿಂದ ಸಮರ್ಥಿಸಬಹುದಾಗಿದೆ.

## ಮರೆಯಲಾಗದ ಮೂರು ಘಟನೆಗಳು

ಬಸವಣ್ಣನ ಕಾರ್ಯಭೂಮಿಗೆ ಸೇರಿದ ದೃಶ್ಯಗಳಲ್ಲಿ ನಾಲ್ಕು ಮಹತ್ವದ್ದಾಗಿವೆ. ಮೊದಲನೆಯದು ಬಾಗೇವಾಡಿಗೆ, ಎರಡನೆಯದು ಸಂಗಮಕ್ಕೆ, ಮೂರನೆಯದು ಮಂಗಳವಾಡಕ್ಕೆ, ನಾಲ್ಕನೆಯ ಹಾಗೂ ಕೊನೆಯ ದೃಶ್ಯವು ಕಲ್ಯಾಣಕ್ಕೆ ಸೇರಿದ್ದು. ಬಾಗೇವಾಡಿಗೆ ಸೇರಿದ ಹದಿನಾರು ವರುಷಗಳ ಅವಧಿಯಲ್ಲಿ ಅನುಭವಿಸಿದ ವೈಷಮ್ಯಗಳು ಆತನ ಇಡಿಯ ಜೀವನದ ಉದ್ದಕ್ಕೂ ಬೆಳೆಯುತ್ತಲೇ ಹೋದವಲ್ಲದೆ ಕಡಿಮೆಯಾಗಲಿಲ್ಲ. ಅವೇ ಆತನ ಸಮಾಜದ ರೂಪರೇಷೆಗೆ, ಜಂಗಮಭಾವಕ್ಕೆ ಪ್ರೇರಕಶಕ್ತಿಗಳಾದವು. ಸಂಗಮದಲ್ಲಿನ ಹತ್ತು ವರುಷಗಳ ಅಧ್ಯಯನ ಫಲವಾಗಿ ಅವನ ನೀಲನಕ್ಷೆ ಸಿದ್ಧವಾಯಿತು. ಆ ನಕ್ಷೆಯ ಕೇಂದ್ರವಸ್ತು ಸಮಾಜ; ಅದನ್ನು ಸುತ್ತುವರೆದು ಬೆಳೆದ ಸಮುಚ್ಚಯವಾದ ಸಂಸ್ಥೆಗಳು ಮತ್ತು ಅದರ ಕಾರ್ಯಭಾರಿಗಳಾದ ಜಂಗಮರು ಪ್ರಮುಖವಾಗಿ ಕಾಣಿಸಿಕೊಂಡವು. ಸಂಗಮದಿಂದ ಮಂಗಳವಾಡಕ್ಕೆ ಬಂದ ಬಸವಣ್ಣ

ಬಿಜ್ಜಳನ ಓಲಗದಲ್ಲಿ ನಿಂತು ವೃತ್ತಿ ಜೀವನವನ್ನೂ ಸಾಮಾಜಿಕ ಅಭ್ಯುದಯದ ಚಿಂತನೆಯನ್ನೂ ಅದಕ್ಕೆ ಸೇರಿದ ವ್ಯವಸ್ಥಾ ಪದ್ಧತಿಯನ್ನೂ ಬೆಳಸಿಕೊಂಡದ್ದು ಮೂರನೆಯ ದೃಶ್ಯಕ್ಕೆ ಸೇರಿದ ಇಪ್ಪತ್ತು ವರುಷದ ಕಥಾವಸ್ತುವಾಗಿದೆ. ನಾಲ್ಕನೆಯ ದೃಶ್ಯದಲ್ಲಿ ತಾನು ರಚಿಸಿದ ಸಾಮಾಜಿಕ ತತ್ತ್ವಗಳನ್ನು ಕಾರ್ಯರೂಪಕ್ಕಿಳಿಸುವಲ್ಲಿ ಆತನು ನಡೆಸಿದ ಆ ದೃಶ್ಯಗಳೆಲ್ಲ ಹದಿನಾಲ್ಕು ವರುಷದ ಕಥಾವಸ್ತು. ಅದೇ ಕೊನೆಯ ದೃಶ್ಯದ ವಸ್ತುವೂ ಆಗಿದೆ. ಆ ಪ್ರಶ್ನೆಗಳೆಲ್ಲವೂ ಲಿಂಗಾಯತನ ಸಮಾಜ ದರ್ಶನಕ್ಕೂ ಧಾರ್ಮಿಕ, ಆಧ್ಯಾತ್ಮಿಕ ದರ್ಶನಕ್ಕೂ ನೇರವಾಗಿ ಬಂದ ಅತ್ಯಂತ ಮಹತ್ವದ ವೃತ್ತಾಂತಗಳನ್ನೊಳಗೊಂಡಿವೆ.

ಬಸವಣ್ಣನ ಜೀವನದ ಕೊನೆಯ ಹಂತದಲ್ಲಿ ನಡೆದ ಮೂರು ಘಟನೆಗಳು ಜಂಗಮ ಭಾವದ ಮೇಲೆ, ಅದರ ವಾಸ್ತವಿಕ ಸ್ವರೂಪದ ಮೇಲೆ ನಿರ್ದಿಷ್ಟವಾದ ಬೆಳಕನ್ನು ಚೆಲ್ಲುತ್ತವೆ. ಅವುಗಳನ್ನು ನಾವು ಮರೆಯಲಾಗದ ಘಟನೆಗಳೆಂದೇ ಕರೆಯುತ್ತೇವೆ.

ಆ ಘಟನೆಗೆ ಸಂಬಂಧಿಸಿದ ಮೊದಲನೆಯ ಕತೆ ಅನುಭವ ಮಂಟಪದ (The Hall of Shiva Experience) ಸಂಸ್ಥಾಪನೆಯ ಮೂಲಕ ಮಂಗಳವಾಡದಲ್ಲಿ ತನ್ನ ಜೀವನದ ಮೂವ್ವತ್ತಾರನೆಯ ವರುಷದಲ್ಲಿ ಆರಂಭಿಸಿದ ಲಿಂಗಾಯತನ ಆಂದೋಲನಕ್ಕೆ ಸೇರಿದ್ದು. ಆಗ ಹೋರಾಟದ ರಂಗಭೂಮಿಯು ಸಿದ್ಧವಾಗಿದೆ. ಒಂದುಕಡೆ ಸಮರ್ಥನೀಯವಾದ ವೃತ್ತಿಜೀವನ, ಅದರ ನೆರವಿನಲ್ಲಿ ಬೆಳೆದುಬರುತ್ತಿದ್ದ ಬಸವಣ್ಣನ ಸಾಮಾಜಿಕ, ಧಾರ್ಮಿಕ ಚಿಂತನೆಗಳು ಸುತ್ತಣ ಪ್ರದೇಶದಲ್ಲಿ ಮಾತ್ರವೇ ಅಲ್ಲ ನಾಡಿನ ಎಲ್ಲ ಕಡೆಗೂ ಹೋಗಿ ಮುಟ್ಟುತ್ತಲಿವೆ. ಆ ಚಿಂತನೆಯಲ್ಲಿ ಪಾಲ್ಗೊಂಡು ಅದರ ವಿಚಾರಗಳನ್ನು ಕಾರ್ಯರೂಪಕ್ಕಿಳಿಸುವುದಕ್ಕೆಂದು ಬಂದವರ ಸಂಖ್ಯೆ ದಿನದಿನಕ್ಕೂ ಹೆಚ್ಚುತ್ತಲಿದೆ. ಅವರನ್ನು ಬಸವಣ್ಣ ಶರಣರೆಂದು ಕರೆದನು, ಅವರೊಂದಿಗೆ ಸೇರಿಕೊಂಡು ನಡೆಸುವ ಚರ್ಚೆ, ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲೆಂದು ಕಟ್ಟಿದ ಸಂಸ್ಥೆಗೆ ಅನುಭವ ಮಂಟಪವೆಂದು ಹೆಸರಿಟ್ಟನು.

ದೂರದ, ಆದರೂ ನೆರೆಯ ಪ್ರದೇಶಕ್ಕೆ ಸೇರಿದ ಬನವಾಸೆಯಲ್ಲಿ, ಜಂಗಮ ತತ್ವವೇ ಮೂರ್ತಿವತ್ತಾಗಿ ಬೆಳೆದಂತಿದ್ದ ಮಹಾ ಮೇಧಾವಿ ಅಲ್ಲಮಪ್ರಭುವಿಗೆ ಆ ಸುದ್ದಿ ತಿಳಿಯದೆ ಇರಲಿಲ್ಲ. ಅವನು ಕಟ್ಟಿದ ಶರಣರ ಸಂಘದಲ್ಲಿ ಸೇರಿಕೊಂಡು ಆತನಿಗೆ ಜಂಗಮ ಭಾವಕ್ಕೆ ಇನ್ನಷ್ಟು ನಿಶ್ಚಿತ ಸ್ವರೂಪವನ್ನು ಕೊಡಬೇಕೆಂಬಾಶಯದಿಂದ ಪ್ರಭು ಬಳ್ಳಿಗಾವಿಯನ್ನು ಬಿಟ್ಟು ಶಿವಯೋಗಿ ಸಿದ್ಧರಾಮನೊಂದಿಗೆ ಕಲ್ಯಾಣ ಪಟ್ಟಣವನ್ನು ಸೇರಿದನು. ಅವರಿಬ್ಬರೂ ಬಸವಣ್ಣನ ಮನೆಗೆ ಬಂದಾಗ ಅವನು ಇಷ್ಟಲಿಂಗಪೂಜೆಯಲ್ಲಿ ನಿರತನಾಗಿದ್ದನು. ಅಲ್ಲಿ ಕಂಡ ದೃಶ್ಯ ಅನಿರ್ವಚನೀಯವಾಗಿದ್ದಿತು. ಒಂದು ಕಡೆ ಶಿವತತ್ವ ವಿದ್ಯಾಭ್ಯಾಸಿಗಳು ವಚನಶಾಸ್ತ್ರವನ್ನು ಓದುತ್ತಿದ್ದಾರೆ, ಕೇಳುತ್ತಿದ್ದಾರೆ. ಇನ್ನೊಂದು ಕಡೆ ಲಿಂಗಾರ್ಚನೆಯಲ್ಲಿ ನಿರತರಾಗಿದ್ದರೆ, ಅಲ್ಲಿ ನೆರೆದಿದ್ದ ಲಕ್ಷದ ಮೇಲೆ

ತೊಂಭತ್ತಾರು ಸಾವಿರ ಜಂಗಮರು ಷಟ್‌ಸ್ಥಲದ ಬಗೆಗೆ ಚರ್ಚಿಸುತ್ತಿದ್ದಾರೆ. ಮತ್ತೊಂದು ಕಡೆ ಲಿಂಗಪೂಜೆಯಲ್ಲಿ ತಲ್ಲೀನನಾಗಿದ್ದ ಬಸವಣ್ಣನಿಗೆ ಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದವನ ಕಡೆ ಗಮನವೇ ಇಲ್ಲದನ್ನು ಪ್ರಭು ನೋಡಿದನು, ಸಂತೋಷಪಟ್ಟನು. ಮನೆಯ ಬಾಗಿಲಲ್ಲಿ ನಿಂತಿರುವ ಜಂಗಮನನ್ನು ಕಾಣದೆ ಲಿಂಗದತ್ತ ಮನ ತಿರುಗಿಸಿದ ಬಸವಣ್ಣನಿಗ ಜಂಗಮದ ಶ್ರೇಯವನ್ನು ತಿಳಿಸಿಕೊಡಲಿಕ್ಕೆಂದೇ ಬಂದ ಪ್ರಭು ಸಿದ್ಧರಾಮನಿಗೆ ತನಗಾದ ಆನಂದವನ್ನು ವ್ಯಕ್ತಪಡಿಸುತ್ತ 'ಗುಹೇಶ್ವರನ ಶರಣ, ಸಂಗನ ಬಸವಣ್ಣನ ಮನೆಯ ಕಂಡು ಧನ್ಯನಾದೆ, ಸಿದ್ಧರಾಮಯ್ಯ' ಎಂದು ಹೇಳಿದನಲ್ಲದೆ, ಇನ್ನೊಂದನ್ನಾಡಲಿಲ್ಲ.

ಬಸವಣ್ಣನಿಗೆ ಪ್ರಭು ಬಂದ ಸುದ್ದಿ ಮುಟ್ಟಿತ್ತು. ಮಹಾಮನೆಯ ಬಾಗಿಲಲ್ಲಿ ನಿಂತ ಜಂಗಮನ ಬಗ್ಗೆ ಪರಿಚಾರಕರು ಸುದ್ದಿ ಮುಟ್ಟಿಸಿದರು. ಆದರೆ ಲಿಂಗಾರ್ಚನೆಯನ್ನು ಬಿಟ್ಟು ಏಳಲು ಬಸವಣ್ಣನಿಗೆ ಆಗದು. ತನ್ನ ಕಾಯವೆ ಭಕ್ತನದಾಗಿದೆ, ಪ್ರಾಣವೆ ಜಂಗಮವಾಗಿದೆ. ಆದ್ದರಿಂದ ಅಲ್ಲಿ ಇಲ್ಲಿ ಎಂಬ ಬೇದಭಾವವಳಿದ ತನಗೆ ಇನ್ನಾರ ಉಪಚಾರವೇ ಕಾಣದೆಂದು ಹೇಳುತ್ತ 'ಮನೆಯ ಬಾಗಿಲ ಬಳಿ ನಿಂತ ಜಂಗಮನನ್ನು ಒಳಗೆ ಕರೆದು ತನ್ನಿರಿ' ಎಂದು ಹೇಳಿ ಕಳಿಸಿದ್ದೇ ಸಾಕಾಯಿತು. ಲಿಂಗ ಹೆಚ್ಚೊ, ಜಂಗಮ ಹೆಚ್ಚೊ ಎಂಬ ಪ್ರಶ್ನೆಯ ವಿಷಯದಲ್ಲಿ ಅವರಿಬ್ಬರ ನಡುವೆ ಉಂಟಾಗಿದ್ದ ವಿವಾದಕ್ಕೆ ಕಾವೇರಿತ್ತು.

ಲಿಂಗವೆ ಜಂಗಮ, ಜಂಗಮವೆ ಲಿಂಗವೆಂದು ನಂಬಿದವರಿಗೆ ದೊಡ್ಡ ಜವಾಬುದಾರಿಯಿದೆ. ಆ ಜವಾಬುದಾರಿಯನ್ನು ಚೆನ್ನಾಗಿ ನಿರ್ವಹಿಸದೆ ಹೋದಲ್ಲಿ ಹಾಲಿನ ಹರವಿಯೊಳಗೆ ಹುಳಿ ಹಾಕಿದಂತಾಗುತ್ತದೆ. ಅಂಗದ ಮೇಲೆ ಇರಿಸಿಕೊಂಡ ಲಿಂಗವನ್ನು ಸಂಗಮನಾಥನೆಂದು ಭಾವಿಸಿ ಮನೆಗೆ ಬಂದ ಶರಣರ ನಿಲವನ್ನು ಅರಿಯದೆ ಹೋದಲ್ಲಿ ತಪ್ಪಾಗುತ್ತದೆ. ದೇವರೆ ಮೈವೆತ್ತಿ ಮನೆಗೆ ಬಂದ ಅವರನ್ನು ಕೂಡಲೆ ಎದ್ದು ಗೌರವಿಸುವುದು ಭಕ್ತನ ನಡತೆಯಾಗಿದೆ. ಒಂದುವೇಳೆ ಅವರು ಕಣ್ಣಿಗೆ ಕಂಡರೂ ಗುರುತಿಸದೆ ಹೋದಲ್ಲಿ ಕರುಳಿಗಾದರೂ ಅರಿವು ಬೇಡವೆ ಎಂಬ ಆಹ್ವಾನ ಪ್ರಭುವಿನದು.

ಲಿಂಗಾರ್ಚನೆಯಲ್ಲಿ ನಿರತನಾದ ಬಸವಣ್ಣನಿಗೆ ಪೂಜೆಯನ್ನು ನಿಲ್ಲಿಸಿ ಜಂಗಮನನ್ನು ಬರಮಾಡಿಕೊಳ್ಳಲು ಇಚ್ಛೆಯಿಲ್ಲ. ಈ ದೇಹವೆ ಭಕ್ತನದು, ಪ್ರಾಣವೆ ಜಂಗಮನದು. ಹಾಗಾದ ಬಳಿಕ ಇಲ್ಲಿ ಅಲ್ಲಿ ಎಂಬ ಭೇದವೇಕೆ ಎನ್ನುವುದೆ ಅವನ ಪ್ರಶ್ನೆ. ಅದರಲ್ಲಿ ಯಾವುದು ಘನ, ಯಾವುದು ಕಿರಿದು ಎಂಬು ಕೇಳುವುದೇ ಸರಿಯಲ್ಲ. ಶರಣರು ಬಂದರೆ ಅವರಿಗೇತಕ್ಕೆ ಉಪಚಾರ? ಎಲ್ಲವೂ ಅವರದೆ, ತನ್ನದೆನ್ನುವುದು ಏನೂ ಇಲ್ಲವೆಂದೇ ಬಸವಣ್ಣನ ಉತ್ತರ.

ಅದ್ವೈತಿಯಾದವನಿಗೇ ಅದ್ವೈತವನ್ನು ಪ್ರತಿಪಾದಿಸಲೆಂದು ಹೊರಟ ಬಸವಣ್ಣನ ಮಾತು ಪ್ರಭುವನ್ನು ಕೆಣಕಿತ್ತು. ಅಂಗೈಯಲ್ಲಿ ಲಿಂಗವನ್ನಿರಿಸಿಕೊಂಡು ಪೂಜಿಸುವವನು

ಮಾತಿನಿಂದ ಅದ್ವೈತವನ್ನು ಸಾಧಿಸಬಹುದೆ? ಅದು ಕೇವಲ ಮಾತಿನ ಮಾಲೆ, ಅಹಂಕಾರವನ್ನು ಹೊತ್ತುಕೊಂಡವನ ನಟನೆ ಆದೀತು. ಬಸವಣ್ಣನ ಮಾತನ್ನು ಕೇಳಿದ ಪ್ರಭು ಮುನಿಸಿಕೊಂಡಿದ್ದನು. ನುಡಿದಂತೆ ನಡೆಯದ ಅದ್ವೈತಿಯನ್ನು ಬಸವಣ್ಣನಲ್ಲಿ ಗುರುತಿಸಿದ ಪ್ರಭು 'ನೀನು ಶಬ್ದಸೂತಕಿ' ಯೆಂದೆ ಕರೆದದ್ದೇ ಕೊನೆಯ ಎಚ್ಚರದ ಮಾತಾಗಿತ್ತು.

ಜಂಗಮ ಹೊರಗೆ ನಿಂತಿರಲು ಮಾಡುವ ಲಿಂಗಾರ್ಚನೆ ಎಂತಹುದಯ್ಯ? ಪ್ರಾಣವನ್ನು ಹೊರಗಿರಿಸಿ ಓಡಾಡುವ ದೇಹವುಂಟೆ? ಪ್ರಭುದೇವನ ಮೂದಲಿಕೆಯಿಂದ ಎಚ್ಚರಗೊಂಡ ಬಸವಣ್ಣ ಜಂಗಮಸ್ವರೂಪಿ ಪ್ರಭುವಿಗೆ ಶರಣು ಬಂದಿದ್ದನೆನ್ನುವುದನ್ನು ಕೆಳಗಿನ ಆತನ ಮಾತೇ ವ್ಯಕ್ತಪಡಿಸುತ್ತದೆ:

ಜಂಗಮವಿಡಿದಲ್ಲದೆ ಲಿಂಗವ ಕಾಣಲಾರದು
ಜಂಗಮವಿಡಿದಲ್ಲದೆ ಗುರುವ ಕಾಣಬಾರದು
ಜಂಗಮವಿಡಿದಲ್ಲದೆ ಪ್ರಸಾದವ ಕಾಣಬಾರದು

ಮಂಗಳವಾಡದಿಂದ ಕಲ್ಯಾಣಕ್ಕೆ ಬಂದ ಬಸವಣ್ಣನ ಜೀವನದಲ್ಲಿ ಕಾಣಿಸಿಕೊಂಡ ಮೊದಲ ಅಪೂರ್ವ ಘಟನೆ ಅದು. ನಟವರ ಕುಲದಲ್ಲಿ ಹುಟ್ಟಿಬಂದ ಪ್ರಭುವನ್ನು ಜಂಗಮನೆಂದು ಅಂಗೀಕರಿಸಿದ್ದು ಜಂಗಮದಲ್ಲಿ ಗುರುವನ್ನೂ ಲಿಂಗವನ್ನೂ ಕಂಡಿದ್ದು ಮರೆಯಲಾಗದ ಸ್ಮರಣೀಯ ಘಟನೆಯಾಗಿದೆ.

ಬಳ್ಳಿಗಾವಿಯಿಂದ ಕಲ್ಯಾಣಕ್ಕೆ ಬಂದ ಪ್ರಭುವಿನ ಸಂಚಾರ ಜ್ಞಾನೋದಯವನ್ನು ಪಡೆದು ಧರ್ಮ ಬೋಧನೆಗೆಂದು ಕೈಗೊಂಡ ಬುದ್ಧದೇವನ ಸಂಚಾರದ ನೆನಪನ್ನು ಮಾಡಿಕೊಡುವಂತಿತ್ತು. ಅದೇ ಸಾಂತ್ವನ, ಅದೇ ಎಚ್ಚರಿಕೆ, ಅದೇ ನಿಷ್ಠುರದ, ಆದರೂ ವಿನಯದ ಮಾತು. ಅಣ್ಣನ ವಿಯೋಗದಿಂದ ಬಳಲುತ್ತಿದ್ದ ಮುಕ್ತಾಯಿಗೆ ಕೊಟ್ಟಿದ್ದ ಅದೇ ಸಾಂತ್ವನ, ದೇವಾಲಯವನ್ನು ಕಟ್ಟಿ ದೇವರ ಬಳಿ ಹೋಗುವ ಹಂಚಿಕೆಯಲ್ಲಿದ್ದ ಸಿದ್ಧರಾಮನಿಗೆ ಹೇಳಿದ್ದು ಅದೇ ಎಚ್ಚರಿಕೆ, ಬದುಕಿನ ಅನುರಾಗವನ್ನು ಕಡಿದೊಗೆದು ಶರಣರ ಸಂಘದಲ್ಲಿ ಸೇರಿಕೊಂಡಿದ್ದ ಮಹದೇವಿಯಕ್ಕನಿಗೆ ಹೇಳಿದ ಅದೇ ನಿಷ್ಠುರದ ನುಡಿ-ಅವೆಲ್ಲವೂ ಪ್ರಭುವನ್ನು ಶರಣರ ಪ್ರೀತ್ಯಾದರಗಳಿಗೆ ಪಾತ್ರವನ್ನಾಗಿ ಮಾಡಿದ್ದವು. ಅವನ ಸಮ್ಮುಖದಲ್ಲಿ, ಅವನೊಂದಿಗಿನ ಒಡನಾಟದಲ್ಲಿ, ಚರ್ಚೆಯಲ್ಲಿ ಅವರು ಕಂಡದ್ದು ಅಸದೃಶ ದೃಷ್ಟಾರನನ್ನು!

ಬಂದ ಕಾರ್ಯವನ್ನು ಕೆಲಮಟ್ಟಿಗೆ ಸಾಧಿಸಿದ್ದಾಗಿದೆ. ಲೋಕ ಸಂಚಾರವನ್ನು ಕೈಕೊಂಡು ಶಿವಪಾರಮ್ಯವನ್ನು ಈಗ ಮೆರೆಯಬೇಕಾಗಿದೆ. 'ನಾನು ಹೋಗಿ ಬರುತ್ತೇನೆ. ಅಲ್ಲಿಯವರೆಗೆ ನೀವು ನಿಮ್ಮ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಿರಿ' ಎಂದು ಹೇಳುತ್ತ ಸಂಚಾರದ ಸಾಫಲ್ಯಕ್ಕೆಂದು ಶರಣರ ಸದಿಚ್ಛೆಗಳನ್ನು ಬೇಡಿ ನಿಂತ ಪ್ರಭು ತನ್ನ ಗಣನೆಗೂ ಮಿಕ್ಕಿದ ವಿಯೋಗವನ್ನೂ ಅಗಲುವಿಕೆಯಿಂದುಂಟಾದ ನೋವನ್ನೂ

ಗುರುತಿಸಿದ್ದನು. ತಾಳ್ಮೆಗೂ ಸಂಯಮಕ್ಕೂ ಪರಿಚಿತರಾಗಿದ್ದ ಶರಣರು ತಾಳ್ಮೆಯನ್ನೇ ಕಳೆದುಕೊಂಡವರಂತೆ ತೋರಿದರು. ಆ ಕಾಲದಲ್ಲಿ ಅವರು ಹೇಳಿದ ಮಾತಿನಲ್ಲಿ ಅವರು ಅನುಭವಿಸಿದ ನೋವು ವ್ಯಕ್ತವಾಗಿದೆ:

ಎಲೆ ಅಯ್ಯಾ, ನೀವು ಹೇಳಿರಯ್ಯ ಎನಗೆ ಗತಿಯೇನು? ಎನಗೆ ಮತಿಯೇನು? ಪ್ರಭುವಿನ ಅಗಲುವಿಕೆಯಿಂದ ಬಳಲಿದ ಸಿದ್ಧರಾಮನ ನೋವು ಅದು!

ನಿಮ್ಮನ್ನಗಲಿ ಒಂದು ನಿಮಿಷ ಸೈರಿಸಬಾರದಯ್ಯ, ನಿಮ್ಮ ನಚ್ಚುಮೆಚ್ಚಿನ ಶರಣರನಗಲುವ ಅಗಲಿಕೆ ಎನ್ನ ಪ್ರಾಣದ ಹೋಕಯ್ಯ! ಚೆನ್ನಬಸವಣ್ಣನ ವಿಯೋಗಾವಸ್ಥೆಯನ್ನು ಸೂಚಿಸುವ ಉದ್ಗಾರ ಅದು!

ಹೊರಗಿದ್ದಾನೆಂಬೆನೆ? ಒಳಗೂ ತಾನೇ ನೋಡಾ! ಒಳಗಿದ್ದಾನೆಂಬೆನೆ? ಹೊರಗೂ ತಾನೆ ನೋಡಾ!.... ಮರಣವಿಲ್ಲದ ಮಹಿಮನ ನಿಲವ ತನ್ನಲ್ಲಿ ನೋಡಿ ಶರಣೆಂಬುದಲ್ಲದೆ ಮರೆಯಬಹುದೆ? ಅದು ಮಡಿವಾಳ ಮಾಚಯ್ಯನ ಪ್ರಶ್ನೆ!

ಅಯ್ಯಾ, ನಿಮ್ಮ ಮಹಾನುಭಾವರನಗಲಿ ಬದುಕಲಾರೆ. ಶಿವಧೋ ಕಂಗಳಶ್ರುಗಳಿಂದ ಮುಂದುಗಾಣೆ. ಲಿಂಗಸಂಗಿಗಳನಗಲಿ ನಾನೆಂದು ಬದುಕುವೆ?....

ಜಟ್ಟನೆ ಜರಿದೆನು, ಬಿಜ್ಜನೆ ಜರಿದೆನು. ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು. ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು, ನಿಮ್ಮ ಶರಣರನಗಲಿದ ಕಾರಣ!

ಸಮಾಜವೇ ತಾನಾಗಿದ್ದ, ತಾನೇ ಸಮಾಜವಾಗಿದ್ದ ಬಸವಣ್ಣನು ಅಲ್ಲಮನ ಅಗಲುವಿಕೆಯಿಂದ `ನಾನೊಬ್ಬನೆ ಉಳಿದೆ'ನೆನ್ನುವ ನೋವು ಆತನಲ್ಲಿರಿಸಿದ್ದ ಅಪಾರ ನಿಷ್ಠೆ, ಪ್ರೀತಿಗಳನ್ನು ಸೂಚಿಸುತ್ತಿದೆ. ಅಷ್ಟರಮಟ್ಟಿಗೆ ಅವನು ಪ್ರಭುವಿನೊಂದಿಗೆ ಒಂದಾಗಿದ್ದನು.

ಕಲ್ಯಾಣದ ಶರಣ ಸಮೂಹದಿಂದ ದೂರವಾಗಿದ್ದುಕೊಂಡ ಪ್ರಭುವು ಒಂದಲ್ಲ, ಎರಡಲ್ಲ, ಹನ್ನೆರಡು ವರುಷಗಳ ಪರ್ಯಂತ ದೇಶಸಂಚಾರ ಕೈಕೊಂಡನು. ರಾಮೇಶ್ವರದಿಂದ ಕೇದಾರದವರೆಗೆ ಕೈಗೊಂಡ ಆತನ ಪ್ರವಾಸ ಭಾರತದ ಧರ್ಮಸಂಸ್ಥಾಪಕರು ತುಳಿದ ದಾರಿಯೂ ಉದ್ದೇಶವೂ ಆಗಿರಲಿಲ್ಲ. ಅದು ಶಿವಪಾರಮ್ಯವನ್ನು ಮೆರೆಯಲೆಂದು ಬಂದವನ ದಾರಿ. ಧರ್ಮದ ದಿಗ್ವಿಜಯವು ಅದರ ಉದ್ದೇಶವಾಗಿರಲಿಲ್ಲ. ಧರ್ಮ, ಜ್ಞಾನಗಳ ಪರಿಮಾಣಗಳ ಸಂವರ್ಧನೆಗೆಂದು ಯೋಜಿಸಿದ ಸಂಚಾರ ಅದು!

ಅದು ೧೧೫೩ನೆಯ ಇಸವಿ. ಪ್ರಭು ಕಲ್ಯಾಣಕ್ಕೆ ಮರಳಿ ಬರುತ್ತಿದ್ದಾನೆಂಬ ಸಂಜ್ಞೆಗಳನ್ನು ಕಂಡು ಶರಣರು ಆತನ ನಿರೀಕ್ಷೆಯನ್ನು ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದರು. ಪ್ರಭು ಸಂಚಾರ ಕೈಕೊಂಡ ಅವಧಿಯಲ್ಲಿ ಕಲ್ಯಾಣ ಪಟ್ಟಣದಲ್ಲಿ ಶರಣರು ಅನುಭವ ಮಂಟಪ ಸಂಸ್ಥೆಯನ್ನು ಕಟ್ಟಿಕೊಂಡು ಅಧ್ಯಕ್ಷಪೀಠವನ್ನು ಏರಲು ಸಮರ್ಥ

ಪುರುಷನೊಬ್ಬನ ದಾರಿಯನ್ನು ಕಾಯ್ದಿದ್ದರು. ಹನ್ನೆರಡು ವರುಷ ತಡೆದುದಾಗಿದೆ. ಇಂದು ಬಂದಾನು, ನಾಳೆ ಬಂದಾನೆಂಬ ನಿರೀಕ್ಷಣೆಯಲ್ಲಿದ್ದ ಜನತೆಯ ದಾಹವನ್ನು ತೃಪ್ತಿಗೊಳಿಸುವ ಮುಂಗಾರಿನ ಮಳೆಯಂತೆ ಕಾಣಿಸಿಕೊಂಡನು!

ಲಿಂಗಾಯತ ಧರ್ಮದ ನೇತಾರ, ಶಿವಸಮಯ ಪ್ರತಿಷ್ಠಾಪನಾಚಾರ್ಯ ಬಸವಣ್ಣನಿಗೆ ಪ್ರಾಣವೆ ಲಿಂಗವಾಗಿ, ಜಂಗಮವಾಗಿ ಬಂದಂತಹ ಅನುಭವವಾಗಿತ್ತು. ಪದ್ಮಪತ್ರಕ್ಕೆರಗಿ ಬಂದ ಭ್ರಮರದಂತೆ ಅವನ ಕಣ್ಣು, ಕಿವಿ, ಮನಸ್ಸುಗಳನ್ನು ಪ್ರಭು ತುಂಬಿಕೊಂಡಿದ್ದನು. ಕಾಣಬಾರದ ವಸ್ತು ಕೈಸೇರಿದ್ದರಿಂದ ಬಸವಣ್ಣ ಆನಂದದಿಂದ ಹಾಡಿದನು. ಆತನನ್ನು ಕಣ್ಣುತುಂಬ ನೋಡಿದನು. ಆತನನ್ನೊಳಗೊಂಡ ಇನ್ನುಳಿದ ಶರಣರ ಅಪೇಕ್ಷೆಯ ಮೇರೆಗೆ ಪ್ರಭುವು ಶೂನ್ಯಸಿಂಹಾಸನವನ್ನೇರಿ ಹನ್ನೆರಡು ವರುಷದ ಆಶಯವನ್ನು ಪೂರ್ತಿಗೊಳಿಸಿದನು.

ಆ ಸಂದರ್ಭವು ಲಿಂಗಾಯತ ಸಮಾಜದಲ್ಲಿ, ಧರ್ಮದಲ್ಲಿ ಕಾಣಿಸಿಕೊಂಡು ಎರಡನೆಯ ಮಹತ್ವದ, ಅಪೂರ್ವವಾದ ಹಾಗೂ ಮರೆಯಲಾಗದ ಘಟನೆಯಾಗಿತ್ತು. ತಮ್ಮ ಹೃದಯ ಸಿಂಹಾಸನದ ಮೇಲೆ ಮೂರ್ತಿಗೊಂಡಂತಿದ್ದ ಪ್ರಭುವನ್ನು ಕಂಡು ಶರಣರಿಗೆ ಅತೀವ ಆನಂದವನ್ನು ತಂದುಕೊಟ್ಟ ಆ ಘಟನೆಯು ಇನ್ನೊಂದು ಗುಂಪಿಗೆ ಸೇರಿದ `ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರೆಲ್ಲರೂ ಬಸವಣ್ಣ, ಪ್ರಭುವಿನ ಮೇಲೆ ಡಂಗುರವನ್ನು ಸಾರುತ್ತ, ಆತನ ಅಧ್ಯಕ್ಷ ಸ್ಥಾನಕ್ಕೆ ವಿರೋಧವನ್ನು ಪ್ರಕಟಿಸುತ್ತ, ಬಸವಣ್ಣನ ವಿರುದ್ಧ ಆಪಾದನೆಯನ್ನು ಮಾಡುತ್ತ ಸಿಟ್ಟಿನಿಂದ ಒದರುತ್ತ ಎದ್ದು ಹೋಗುವುದಕ್ಕೆ ಕಾರಣವಾಗಿತ್ತು:

ಅರಳಿದ ಕಣ್ಣಿನವರನ್ನು ಕಂಡು `ಹೂ' ಬಿದ್ದ ಕಣ್ಣಿನವರು ಸೈರಿಸದಂತೆ ಅವರು ಸೈರಣೆ ಕಳೆದುಕೊಂಡು ಆಲಾಪಿಸುತ್ತಿದ್ದರು: ಅರಸನನ್ನು ನೋಡಿ ಪ್ರಜೆಗಳನ್ನು ಮರೆತಂತೆ ಈ ವ್ರತಗೇಡಿ ಬಸವಣ್ಣನ ಆಚರಣೆಯಾಗಿದೆ. ಮಹೇಂದ್ರ ಜಾಲಕನೊಬ್ಬನನ್ನು ಪ್ರಭುವೆಂದು ಕುಳ್ಳಿರಿಸಿಕೊಂಡು ತನ್ನ ಪ್ರಾಣಲಿಂಗವೆಂದು, ನಮ್ಮನ್ನು ತಿರುಗಿ ನೋಡಲಿಲ್ಲ. ಆತನಲ್ಲಿ ಏನು ಲೇಸು ಕಂಡನು? ನಮ್ಮಲ್ಲಿ ಏನು ಅಯೋಗ್ಯತೆಯನ್ನು ಕಂಡನು? ಕಂಚನೊಲ್ಲದೆ ಹಂಚುಹಿಡಿದನು. ಅನಾಚಾರಿಯವನೊಬ್ಬ, ವ್ರತಗೇಡಿ ಬಸವನೊಬ್ಬ. ಇವರಿಬ್ಬರೂ ದೇವಲೋಕ, ಮರ್ತ್ಯಲೋಕಕ್ಕೆ ಹೊರಗು. ಇವರ ಮುಖವನ್ನು ನೋಡಲಾಗದು ಎಂದು ಹೇಳುತ್ತ ಜಂಗಮರ ಸಂಘವು ಶೂನ್ಯಸಿಂಹಾಸನ ಅಧ್ಯಕ್ಷತೆಯ ಸಮಾರಂಭವನ್ನು ವಿರೋಧಿಸುತ್ತ ಹೊರಟುಹೋದ ಘಟನೆಯು ದುರ್ದೈವದಿಂದ ಅಂದಿನ ಕಾಲಕ್ಕೆ ಮಾತ್ರ ತಾತ್ಪೂರ್ತಿಕವಾಗಿ ಸಂಬಂಧಿಸಿರದೆ ಮುಂದಿನ ಕಾಲದಲ್ಲಿಯೂ ಲಿಂಗಾಯತನ ಸಮಾಜ ಮತ್ತು ಧರ್ಮದಲ್ಲಿ ಸಂಘರ್ಷಣೆಯನ್ನುಂಟುಮಾಡುವುದಕ್ಕೆ ಕಾರಣವಾಗಿತ್ತು.

ಇದ್ದಕ್ಕಿದ್ದಂತೆ ಅಂದಿನ ಸಮಾರಂಭವನ್ನು ವಿರೋಧಿಸಿ ಹೊರಟು ಹೋದ

ಜಂಗಮರ ನಡತೆಯ ಬಗ್ಗೆ ಅಧ್ಯಕ್ಷತೆಯನ್ನು ವಹಿಸಿದ ಪ್ರಭು, ಚೆನ್ನಬಸವಣ್ಣ, ಸೊಡ್ಡಳ ಬಾಚರಸ ಮತ್ತು ಬಸವಣ್ಣನ ಕೆಳಗಿನ ಪ್ರತಿಕ್ರಿಯೆಗಳು ಅವರ ಸ್ವಭಾವ, ನಡತೆಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ:

ಲಿಂಗ ಜಂಗುಳಿಗಳೆಲ್ಲಾ ಅಶನಕ್ಕೆ ನೆರೆದರು. ಲಿಂಗದ ಹವಣವನ್ನು ಇವರೆತ್ತ ಬಲ್ಲರು? ಕಾಯ ಜೀವಿಗಳು, ಕಳವಳ ಧಾರಿಗಳು, ದೇವರ ಸುದ್ದಿಯನ್ನು ಇವರೆತ್ತಬಲ್ಲರು? ಮದ್ಯಪಾನವನ್ನುಂಡು ಮದವೆದ್ದ ಜೋಗಿಯಂತೆ ನುಡಿವರು. ಅದು ಪ್ರಭುವಿನ ಪ್ರತಿಕ್ರಿಯೆ.

ಧರೆಯ ಮೇಲೆ ಸುಳಿದಾಡುವ ಲಾಂಛನಧಾರಿಗಳೆಲ್ಲರೂ ಹದಿನೆಂಟು ಜಾತಿಯ ಮನೆಯಲುಂಡು ಕೆಟ್ಟರಯ್ಯ. ಗಿರಿಯಲ್ಲಿಪ್ಪ ಜಡೆಯ ಧಾರಿಗಳೆಲ್ಲರೂ ಫಲವೃಕ್ಷಂಗಳನುಂಡು ಕೆಟ್ಟರಯ್ಯ! ತರಗೆಲೆಯ ಮೆಲಿದು ತಪಸಿಪ್ಪವರೆಲ್ಲರೂ ವಾಯು ಭಕ್ಷಣವನುಂಡು ಕೆಟ್ಟರಯ್ಯ! ಅರಿಕೆಯ ಇಂದ್ರಿಯಗಳನ್ನು ಕಟ್ಟಿ, ಕುರುಹಿನ ರಾಜ್ಯಕ್ಕೆ ಬಂದು ನರಕಿಕ್ಕೆಳೆವರ ಹಿರಿಯರೆಂದು ಎನ್ನದೆನ್ನ ಮನವು. ಯಾರಿಗೆ ನಮ್ಮ ದೇವರು ಬೇಕಿಲ್ಲವೊ ಅವರ ಬೆನ್ನಲ್ಲಿ ಹೋಗಲಿ, ನಾನು ಪ್ರಭುವನ್ನು ಬಿಡಲಾರೆನು. ಚೆನ್ನಬಸವಣ್ಣನ ಕಠೋರವೂ ನಿಶ್ಚಿತವೂ ಆದ ಅಭಿಪ್ರಾಯ ಹೀಗಿದ್ದಿತು.

ಅಡವಿಯಲ್ಲಿ ಮದವೇರಿದ ಆನೆಯ ಹಿಂಡು ಆನಂದಲೀಲೆಯಲ್ಲಿರುತ್ತಿರಲು ಕೇಸರಿ ಬರಲು ಆನೆಗಳು ಕೆದರಿ ಓಡಿಹೋಗುವಂತೆ ಪ್ರಭುದೇವನು ಬಂದಕೂಡಲೆ ಶಿವಗಣಂಗಳು ಓಡಿಹೋದರು. ಸೊಡ್ಡಳದ ಬಾಚರಸನ ಪ್ರತ್ಯಕ್ಷ ಅನುಭವವು ಹೀಗಿದ್ದಿತು.

ಅಯ್ಯಾ ನಿಮ್ಮ ಶರಣರ ಸಂಗವೆನಗೆ ಪರಮ ಸುಖವಯ್ಯ. ನಿಮ್ಮ ಶರಣರ ಅಗಲಿಕೆ ನನ್ನ ಪ್ರಾಣ ವಿಯೋಗವಯ್ಯ. ಶಿವಶಿವಾ. ಸಂತೋಷವಾಗುವುದು ಇನ್ನು ಹೇಗೆ? ಎನಗೇನು ಗತಿ? ನಿಮ್ಮ ಶರಣರ ಮುನಿಸು ನನಗೆ ಬಿಡಿಸಲಾರದ ತೊಡಕು.

ತನ್ನ ಸ್ವಂತ ಹಿತಕ್ಕಲ್ಲ, ಸಮಾಜದ ಕ್ಷೇಮಾಭಿವೃದ್ಧಿಗೆಂದು ಯೋಜಿಸಿಕೊಂಡಿದ್ದ ಕನಸು ಭಗ್ನವಾಗುತ್ತಿದೆ. ತಲೆತಲಾಂತರಗಳಿಂದ ಶೋಷಣೆಗೆ ಈಡಾಗಿದ್ದ ಜನತೆಯ ಹಿತಕ್ಕೆಂದು ಯೋಜಿಸಿದ, ಹಂಚಿಕೆಯನ್ನು ಕಾರ್ಯರೂಪಕ್ಕಿಳಿಸುವಲ್ಲಿ ಯಾರೊ ಹಿಂದೇಟು ಹಾಕುತ್ತಿದ್ದಾರೆ. ಅದನ್ನು ನೋಡಲಾಗದ, ಸಹಿಸಲಾಗದ ನೋವು ಬಸವಣ್ಣನದು. ಆತನು ಪ್ರಭುವಿನಲ್ಲಿ ಪ್ರಾರ್ಥಿಸಿಕೊಳ್ಳುತ್ತ, ``ನಿಮ್ಮ ಶರಣರ ಮನ ನೊಂದಲ್ಲಿ ನಾನು ಸೈರಿಸಿಕೊಳ್ಳಲಾರೆ. ಹಾವೂ ಸಾಯದಂತೆ, ಕೋಲೂ ಮುರಿಯದಂತೆ ಮಾಡು, ನಿಮ್ಮ ಧರ್ಮ'' ಎಂದು ಬೇಡಿಕೊಂಡನು.

ಪ್ರಭು ಹೇಳಿದ, ಆದರೂ ಕೇಳಲೊಲ್ಲರು. ತಮ್ಮ ತಾವರಿಯರು. ಬಸವಣ್ಣ ಮತ್ತೆ ಮತ್ತೆ ಮತ್ತೆ ಬೇಡಿಕೊಂಡನು. ``ಅವರು ಎಡಪಾದದಿಂದ ಒದ್ದರೆ, ಬಲದ

ಪಾದ ಹಿಡಿಯುತ್ತೇನೆ. ಬಲಪಾದದಿಂದ ಒದ್ದರೆ ಎಡದ ಪಾದ ಹಿಡಿಯುತ್ತೇನೆ. ರಕ್ಷಿಸಿರಿ, ರಕ್ಷಿಸಿರಿ. ಕ್ಷಮೆ ನಿಮ್ಮದು, ನಿಮ್ಮ ಕರುಣದ ಕಂದ ನಾನು" ಎಂದು ಪ್ರಭುವಿನಲ್ಲಿ ಬೇಡಿಕೊಂಡನು. ಅಂದು ನಡೆದ ಸಂಧಾನದಿಂದಾಗಿ ಮಹಾಗಣಂಗಳು ಮುನಿಸು ತಿಳಿದು ಪ್ರಸನ್ನರಾಗಿದ್ದರು.

ಸಂಧಾನವೇನೊ ಆಯಿತು. ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರೂ ಮತ್ತೆ ತಿರುಗಿ ಬಂದು ಬಸವಣ್ಣನ ಆಶ್ರಯದಲ್ಲಿ ನಿಂತದ್ದೂ ಆಯಿತು. ಕಲ್ಯಾಣದಲ್ಲಿ ಕಾಣಿಸಿಕೊಂಡಿದ್ದ ಅಷ್ಟು ಜಂಗಮರು ಎಲ್ಲಿಂದ ಬಂದರು? ಅವರು ಯಾರು, ಅವರ ಹಿನ್ನೆಲೆಯೇನು? ತನ್ನ ಕಾರ್ಯದಲ್ಲಿ ಪಾಲುಗಾರರಾಗಬೇಕಿದ್ದ ಜಂಗಮನನ್ನು ಹುಡುಕುತ್ತಿದ್ದ ಬಸವಣ್ಣನ ಪಾಲಿಗೆ ಅಷ್ಟು ಸಂಖ್ಯೆಯಲ್ಲಿ ದಿಢೀರನೆ ಕಾಣಿಸಿಕೊಂಡ ಆ ಜಂಗಮರು ಎಲ್ಲಿಂದ ಬಂದರು? ಆ ಕಾಲದ ಶರಣರ ಹೇಳಿಕೆಗಳಲ್ಲಿ ನಮಗೆ ಉತ್ತರ ದೊರೆಯುವುದಿಲ್ಲ. ಆದರೆ ಹದಿನೈದನೆಯ ಶತಮಾನದ ಅವಧಿಯಲ್ಲಿ ರಚಿತವಾಗಿರುವ ಶೂನ್ಯಸಂಪಾದನೆ ಗ್ರಂಥಗಳಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರ ಸಂಖ್ಯೆ ಏಕಾಏಕಿಯಾಗಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಏನು ಕಾರಣ?

ಬಸವಣ್ಣನ ಮತ್ತು ಬಸವೋತ್ತರ ಕಾಲದ ಇತಿಹಾಸದಲ್ಲಿ, ಮುಖ್ಯವಾಗಿ ಕಾಳಾಮುಖರಿಗೆ ಸೇರಿದ ಧಾರ್ಮಿಕ, ಸಾಮಾಜಿಕ ಇತಿಹಾಸದಲ್ಲಿ ದೊರೆಯುವ ಕೆಲವು ಸಂಗತಿಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಬಹುದಾಗಿದೆ. ಬಾಗೇವಾಡಿ, ಸಂಗಮ ಕ್ಷೇತ್ರದ ಸುತ್ತುಮುತ್ತಣ ನಾಡಿನಲ್ಲಿ ಆಗ ಕಾಳಾಮುಖರ ಪ್ರಾಬಲ್ಯವಿದ್ದಿತು. ಅವರು ಕಟ್ಟಿಸಿದ ದೇವಸ್ಥಾನಗಳು, ಆಗಿನ ಧಾರ್ಮಿಕ, ಸಾಮಾಜಿಕ ವ್ಯವಸ್ಥೆಯ ರಕ್ಷಣೆಯಲ್ಲಿದ್ದ ದೊರೆ, ವಿಪ್ರರು ಮತ್ತು ಮಹಾಜನರು ನಡೆಸಿದ ಶೋಷಣೆಯನ್ನು ಅನುಭವಿಸುತ್ತಿದ್ದ ಸಮಾಜವು ಜಿಗುಪ್ಸೆಗೊಂಡಿದ್ದಿತು. ಅಂತಹ ಪ್ರಪಂಚದಲ್ಲಿ ಕಾಣಿಸಿಕೊಂಡ ಬಸವಣ್ಣನ ಆಂದೋಲನದಿಂದಾಗಿ ಕಾಳಾಮುಖ ಧರ್ಮವು ಅವಸಾನದ ದಾರಿಯಲ್ಲಿ ಮುಖ ಮಾಡಿಕೊಂಡು ನಡೆಯುತ್ತ ಹದಿನೈದನೆಯ ಶತಮಾನದ ಅವಧಿಯ ಹೊತ್ತಿಗೆ ಅದು ಸಂಪೂರ್ಣವಾಗಿ ಲಿಂಗಾಯತ ಧರ್ಮದಲ್ಲಿ ಕರಗಿಹೋಗಿತ್ತೆಂದು ಇತಿಹಾಸಕಾರರೂ ಮಾನವಶಾಸ್ತ್ರಜ್ಞರೂ ಹೇಳಿದ್ದುಂಟು. ಹದಿನೈದನೆಯ ಶತಮಾನದಲ್ಲಿ ಸಂಪಾದಿತವಾಗಿರುವ ಶೂನ್ಯಸಂಪಾದನೆಯಲ್ಲಿ ಕಾಣಿಸಿಕೊಂಡಿರುವ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರು ಕಾಳಾಮುಖ ಜಂಗಮರಾಗಿರಬಹುದೇ ಎಂಬ ಸಂದೇಹಕ್ಕೆ ಇಂಬುಗೊಡುವಂತಿದೆ. ತಮ್ಮ ಹೆಸರಿನ ಮುಂದೆ ಆರಾಧ್ಯ, ಶಿವಾಚಾರ್ಯ, ಮಠ, ಅಯ್ಯ ಮುಂತಾದ ಪ್ರತ್ಯಯಗಳನ್ನು ಹಚ್ಚಿಕೊಂಡ ಅನೇಕರಲ್ಲಿ ನಾವು ಈಗಲೂ ಕಾಳಾಮುಖರ ದೃಷ್ಟಿಕೋನ, ಮೌಲ್ಯಗಳನ್ನು ನೋಡಬಹುದಾಗಿದೆ. ಅಂದು ನಟವರ ಕುಲದ ಪ್ರಭುವನ್ನು ಶೂನ್ಯಪೀಠದ ಅಧ್ಯಕ್ಷತೆಗೇರಿಸಿದ ಬಸವಣ್ಣನಿಗೆ ತೋರಿದ ಪ್ರತಿಭಟನೆಯನ್ನು ನಾವು ಈಗಲೂ ಮಠ, ಅಯ್ಯ ಪ್ರತ್ಯಯವನ್ನು ತಮ್ಮ ಹೆಸರಿನ ಮುಂದೆ ಹಚ್ಚಿಕೊಂಡಿರುವವರಲ್ಲಿ ಕಾಣಬಹುದಾಗಿದೆ. ಉತ್ತಮಕುಲವಾದವನ್ನು ಮೆರೆಯುವಲ್ಲಿ

ಅವರು ಅಂದು ತೋರಿದ ಅಸಹನೆಯನ್ನು ಇಂದಿನ ಆರಾಧ್ಯರೂ ಶಿವಾಚಾರ್ಯರೂ ತೋರುತ್ತಿರುವರೆನ್ನುವುದಕ್ಕೆ ಪ್ರಮಾಣಾರ್ಹವಾದ ಆಧಾರಗಳು ದೊರೆಯುತ್ತವೆ.

ಬಸವಣ್ಣನ ಜೀವನಕ್ಕೆ ಸಂಬಂಧಿಸಿದ ಕೊನೆಯ ದೃಶ್ಯದಲ್ಲಿ ಸಂಭವಿಸಿದ ಹರಳಯ್ಯ ಮಧುವರಸರ ಮಕ್ಕಳ ಮದುವೆಯಿಂದಾಗಿ ಕಲ್ಯಾಣದಲ್ಲಿ ನಡೆದ ದುರಂತವು ಕ್ರೂರವೂ ಮರೆಯಲಾಗದ ಮೂರನೆಯ ಘಟನೆಯೂ ಆಗಿದೆ. ಈ ದುರಂತದ ಮೂಲ ಕಾರಣವೇನು? ಯಾರಿಂದ ಇದು ನಡೆಯಿತು? ಎನ್ನುವ ಪ್ರಶ್ನೆಗಳಿಗೆ ಬಸವಣ್ಣನ ಒಂದು ವಚನದಲ್ಲಿ ಉತ್ತರ ದೊರೆಯುತ್ತದೆ. ಶೂನ್ಯ ಸಂಪಾದನಾಕಾರರೂ ಅದೇ ವಚನವನ್ನು ಉದ್ಧರಿಸಿದ್ದು ಕಂಡುಬರುತ್ತದೆ; ಆ ವಚನವು ಹೀಗಿದೆ:

ಅರಸು ವಿಚಾರ, ಸಿರಿಯು ಶೃಂಗಾರ ಸ್ಥಿರವಲ್ಲ, ಮಾನವಾ
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ
ಒಬ್ಬ ಜಂಗಮದ ಅಭಿಮಾನದಿಂದ
ಚಾಳುಕ್ಯರಾಯನ ಆಳ್ವಿಕೆ ತೆಗೆಯಿತ್ತು

ಚಾಲುಕ್ಯ ರಾಜ್ಯವು ಎಷ್ಟು ರಭಸದಿಂದ ಮೂಡಿಬಂದಿತ್ತೋ ಅಷ್ಟೇ ರಭಸದಿಂದ ಅಸ್ತಂಗತವಾಗಿತ್ತು. ಅಷ್ಟೇ ತೀವ್ರಗತಿಯಿಂದ, ರಭಸದಿಂದ ಉದಯವಾಗಿದ್ದ, ವಿಸ್ತಾರವಾಗಿ ಹಬ್ಬಿದ್ದ ಲಿಂಗಾಯತ ಧರ್ಮಕ್ಕೆ ಶರಣ ಸಮಾಜಕ್ಕೆ ಅಂದು ನಡೆದ ದುರಂತ ಘಟನೆಯಿಂದಾಗಿ ಧಕ್ಕೆ ಬಂದರೂ ಅದನ್ನು ತಡೆದುಕೊಳ್ಳುವ ಸಾಮರ್ಥ್ಯವನ್ನು ಅವು ಮೆರೆದವು. ಆದರೂ ಸುತ್ತಣ ಪರಿಸರದ ಒತ್ತಡಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಶರಣರೂ ಅವರ ಆಂದೋಲನವೂ ಮುಂದಿನ ಎರಡು ಶತಮಾನಗಳವರೆಗೆ ಭೂಗತವಾಗಿದ್ದುಕೊಂಡು ಬರಲಿರುವ ಅವಕಾಶವನ್ನು ನಿರೀಕ್ಷಿಸುತ್ತಿದ್ದವು. ಆ ಅವಕಾಶಕ್ಕೆ ೧೫ನೆಯ ಶತಮಾನದ ಉತ್ತರ ಕರ್ನಾಟಕವು ಒದಗಿಸಿಕೊಟ್ಟು ಉತ್ತರದಲ್ಲಿ ಉದಯವಾಗಿದ್ದ ಲಿಂಗಾಯತ ಧರ್ಮವನ್ನು ದಕ್ಷಿಣ ಕರ್ನಾಟಕದತ್ತ ಕರೆದೊಯ್ಯಲು ಕಾರಣವಾದವು. ವಿಜಯನಗರದ ನೂರೊಂದು ವಿರಕ್ತ ಜಂಗಮರ ನೆರವಿನಲ್ಲಿ, ಹದಿನಾರನೆಯ ಶತಮಾನದ ತೋಂಟದಾರ್ಯನು ಸಂಘಟಿಸಿದ ಜಂಗಮ ಸಮುದಾಯದ ನೇತೃತ್ವದಲ್ಲಿ ತಲೆಮರೆಸಿಕೊಂಡಿದ್ದ ಬಸವಣ್ಣನ ಧರ್ಮ, ಮುನ್ನಿನ ಶಕ್ತಿಯನ್ನು ಮತ್ತೆ ಅಭಿವೃದ್ಧಿಸಿಕೊಂಡು ಮುಂದುವರಿದಿತ್ತು.

ಹನ್ನೆರಡನೆಯ ಶತಮಾನದಿಂದ ಮುಂದಿನ ಮೂರುವರೆ ಶತಕಗಳ ಅವಧಿಯಲ್ಲಿ ಶರಣರ ಧರ್ಮದಲ್ಲಿ ಗಮನಾರ್ಹವಾದ ಸ್ಥಿತ್ಯಂತರಗಳುಂಟಾದವು. ಅವುಗಳಲ್ಲಿ ಒಂದು ಮಹತ್ವದ ಬದಲಾವಣೆ ಉಂಟಾದುದು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ್ದು. ಇಷ್ಟೊತ್ತಿಗೆ ಜಂಗಮವು ತನ್ನ ಮುನ್ನಿನ ತಾತ್ವಿಕ ನಿಲವನ್ನೂ ಮೌಲ್ಯಗಳನ್ನೂ ಕೆಲಮಟ್ಟಿಗೆ ಕಳೆದುಕೊಂಡು ಜಂಗಮ ವ್ಯಕ್ತಿ ಸಂಸ್ಥೆಯಾಗಿ ಜಂಗಮ ಸಂಸ್ಥೆಯನ್ನು ತುಳಿದು ತಾನೇ ಸಂಸ್ಥೆಯಾದ ವ್ಯಕ್ತಿಯೂ ಆಗಿ, ಜಾತಿ ಮತ್ತು ಉತ್ತಮವಾದಕ್ಕೂ

ಪರಿವರ್ತಿತವಾಗುವುದರ ಜೊತೆಗೆ ಪುರೋಹಿತಶಾಹಿಯ ಪುನರಾವೃತ್ತಿಗೂ ಅವಕಾಶವನ್ನುಂಟು ಮಾಡಿಕೊಟ್ಟಿದ್ದು ಕಂಡುಬರುತ್ತದೆ.

**ಜಂಗಮ-ಜಾತಿ-ಈಗ**

ಇಂದು `ಜಂಗಮ'ವು ಒಂದು ಜಾತಿಯಾಗಿದೆ. `ಜಾತಿ'ಯು ಎಲ್ಲ ಲಕ್ಷಣಗಳನ್ನು ಒಂದೊಂದಾಗಿ ಈ ಕಾಲದ ಜಂಗಮಕ್ಕೆ ಹಚ್ಚಿನೋಡಿದಾಗ ಬಸವಣ್ಣನ ಕಾಲದಲ್ಲಿ ತಳೆದ ಶಬ್ದದ ಸಾಂಕೇತಿಕ ಅರ್ಥ ಇಂದು ತನ್ನ ಸ್ವರೂಪವನ್ನು ಕಳೆದುಕೊಂಡು ವಿಕೃತವಾಗಿ ಕಾಣಿಸಿಕೊಂಡಿದೆಯೆನ್ನುವುದು ಈ ಕೆಳಗಿನ ವಿವರಣೆಯಿಂದ ಕಂಡುಬರುತ್ತದೆ.

ಜಾತಿಯ ಒಂದು ಮುಖ್ಯ ಲಕ್ಷಣ ಒಳಮದುವೆ. ತಮ್ಮ ಗುಂಪು ಇಲ್ಲವೆ ಒಳಪಂಗಡದಲ್ಲಿ ಮದುವೆಯಾಗುವುದು. ಸಂನ್ಯಾಸವನ್ನು ಕೈಕೊಂಡ ವಿರಕ್ತರು, ಗುರು ವರ್ಗದವರ ಪೂರ್ವಾಶ್ರಮದ ಕುಟುಂಬಗಳು ತಮ್ಮ ತಮ್ಮ ಗುಂಪಿಗೆ ಸೇರಿದ ಜನರನ್ನು ಮದುವೆಯಾದಂತೆ, ಮಠ ಎಂಬ ಪದದಲ್ಲಿ ಕೊನೆಗೊಳ್ಳುವ ಎಲ್ಲ ಹೆಸರಿನವರು ಮಠ ಪದವಿಲ್ಲದೆ ಕೊನೆಗೊಳ್ಳುವ ಹೆಸರಿನವರೊಂದಿಗೆ ಹೆಣ್ಣು ಗಂಡು ಕೊಡುವುದನ್ನು, ತೆಗೆದುಕೊಳ್ಳುವುದನ್ನು ಮಾಡುವುದಿಲ್ಲ. ಎಂದರೆ ಹಿರೇಮಠಕ್ಕೆ ಸೇರಿದ ಜಂಗಮನು ಪೂಜಾರಿ, ಗಣಾಚಾರಿ ಮನೆತನದವರೊಂದಿಗೆ ಮದುವೆ ಮಾಡಲು ಇಚ್ಛಿಸುವುದಿಲ್ಲ. ಭಕ್ತರ ಮನೆಯ ಹುಡುಗನು ಜಂಗಮ ಹುಡುಗಿಯನ್ನು ಮದುವೆ ಆದದ್ದೆ ಆದರೆ ಅದು ಜಂಗಮನ ದೃಷ್ಟಿಯಲ್ಲಿ ``ಪ್ರತಿಲೋಮ''.

ಜಾತಿಯ ಎರಡನೆಯ ಮಹತ್ವದ ಲಕ್ಷಣ ಅನುಶ್ರೇಣಿ. ನಿಚ್ಚಣಿಕೆಗೆ ಒಂದರ ಮೇಲೊಂದು ಹಲ್ಲು ಇದ್ದಂತೆ ಜಾತಿ ಎಂಬ ನಿಚ್ಚಣಿಕೆಗೂ ಹಲ್ಲುಗಳು ಇದ್ದು, ಅವು ಒಂದಕ್ಕಿಂತ ಒಂದು ಹೆಚ್ಚು ಎಂದು ಸ್ಪರ್ಧಿಸುವವು. ಹಾಗೆಯೆ ಸಮಕಾಲೀನ ಜಂಗಮನು ಲಿಂಗಾಯತರಲ್ಲಿ ತಾನು ಎಲ್ಲಕ್ಕೂ ಹೆಚ್ಚು ದೊಡ್ಡವ, ಶ್ರೇಷ್ಠ ಅಥವಾ ಉತ್ತಮನೆಂದು ತಿಳಿದಿರುವನು. ಸಾಲದ್ದಕ್ಕೆ ಜಂಗಮ ಜಾತಿಗೆ ಸೇರಿದ ಗುಂಪಿನಲ್ಲೇ ತರ-ತಮ ಭಾವವಿದ್ದು ಅದರಲ್ಲಿ ಹೆಚ್ಚಿನ ಶ್ರೇಣಿಗೆ ತಾನು ಸೇರಿದ್ದೇನೆಂದು ತಿಳಿದುಕೊಳ್ಳುವ ಜಂಗಮನು ತನಗಿಂತಲೂ ಸಣ್ಣವರೆಂದೆನ್ನಿಸಿಕೊಂಡವರೊಂದಿಗೆ ಮದುವೆಯಾಗುವುದಿಲ್ಲವಷ್ಟೇ ಅಲ್ಲ, ತನ್ನ ವೃತ್ತಿ ದೊಡ್ಡದು, ತನ್ನ ಪಾದಕ್ಕೆ ಎಲ್ಲರೂ ಬಂದು ಹಣೆ ಹಚ್ಚಿ ನಮಸ್ಕಾರ ಮಾಡಬೇಕೆಂದು ಇಚ್ಛೆಪಟ್ಟವನಾಗಿದ್ದಾನೆ. ಜಗದ್ಗುರು ಎಂದು ಹೇಳಿಕೊಳ್ಳುವ ಜಂಗಮನು ಜಗದ್ಗುರು ಅಲ್ಲದವರಿಂದ ವಿಧೇಯತೆಯನ್ನು ಅಪೇಕ್ಷಿಸುತ್ತಾನೆ. ಜಂಗಮರಲ್ಲಿ ಎಲ್ಲರಿಗೂ ಹೆಚ್ಚಿನವರು ಯಾರು ಎಂದು ಕೇಳಿದರೆ ಶ್ರೇಷ್ಠನಾದವನು, ಶ್ರೇಷ್ಠನಲ್ಲದವನು ಕೊಡುವ ಉತ್ತರವೆ ಒಂದೊಂದು ತೆರ. ಅವರವರ ಉತ್ತರ ಅವರವರ ಶ್ರೇಣಿ ಸ್ಥಾನವನ್ನು ಅನುಸರಿಸುತ್ತದೆ. ಈ ಶ್ರೇಣಿ ಸ್ಥಾನ ಹಳ್ಳಿ ಪ್ರದೇಶಗಳು ಭಿನ್ನ ಭಿನ್ನವಾದಂತೆ ಅವುಗಳಲ್ಲಿಯ ಭಿನ್ನತೆಯೊಂದಿಗೆ ಅವು ಹೊಂದಿಕೊಂಡಿರುತ್ತವೆ.

ಶ್ರೇಣಿ ಸ್ಥಾನವನ್ನು ಸಮರ್ಥಿಸುವ ಪೂರಕವಾದವೆಂದರೆ ಉತ್ತಮವಾದ. ಉತ್ತಮವಾದಿಗಳು ತಾವೇ ಪವಿತ್ರರು, ದೇವರಿಗೆ ಸಮೀಪರಾದವರು, ಇಲ್ಲವೆ ದೇವರಿಗೆ ಸಮನಾದವರು ಅಥವಾ ತಾವೇ ದೇವರು, ತಮ್ಮನ್ನು ಬಿಟ್ಟು ಬೇರೆ ದೇವರಿಲ್ಲವೆಂದು ನಂಬುವುದುಂಟು. ಎಂದರೆ ದೇವರನ್ನೇ ತುಳಿದು ನಿಂತವನು ಈ ಶ್ರೇಣಿ ಸ್ಥಾನದ ಮೇಲಿನ ಮೆಟ್ಟಿಲಲ್ಲಿರುವ ಜಂಗಮನು. ಹಿಂದೆ ಬಾಳೆಹಳ್ಳಿಯ ಒಂದು ಬಡ ಜಂಗಮ ಕುಟುಂಬದಲ್ಲಿ ಹುಟ್ಟಿ, ದನ ಕರುಗಳನ್ನು ಕಾಯುತ್ತ ಬೆಳೆದುಬಂದ ಒಬ್ಬ ಹುಡುಗ ದುರದೃಷ್ಟವೊ ಎಂಬಂತೆ ಗುರುಪಟ್ಟಕ್ಕೆ ಸೇರಿದ ಬಾಳೆಹಳ್ಳಿಯ ಮಠದ ಜಗದ್ಗುರುವಾಗಿ ಕೊನೆಗೆ ಮುಕ್ತಿ ಮಂದಿರದಲ್ಲಿ (ಅಕಾಲ?) ಮರಣ ಹೊಂದಿದ ಆ ಜಂಗಮನು ಅಂತಹ ಶ್ರೇಣಿಯ ತುತ್ತತುದಿಯಲ್ಲಿ ನಿಂತವನೆಂಬ ಅಗ್ಗಳಿಕೆಯನ್ನು ಅಡ್ಡಪಲ್ಲಕ್ಕಿ ಉತ್ಸವದ ಮೂಲಕ ಪ್ರದರ್ಶಿಸಿದವರಲ್ಲಿ ಮೊದಲಿಗನು.

ಕರ್ನಾಟಕದಲ್ಲಿ ಗುರುವರ್ಗ, ವಿರಕ್ತವರ್ಗ ಎಂಬ ಎರಡು ಜಂಗಮ ಜಾತಿಗಳಿವೆ. ಆದರೆ ಅವುಗಳ ಸುಸ್ಪಷ್ಟ ಲಕ್ಷಣಗಳು ನಿಚ್ಚಳವಾಗಿಲ್ಲ. ಆದ್ದರಿಂದ ತನ್ನ ಶ್ರೇಷ್ಠತೆಯನ್ನು ತೋರಿಸಬೇಕೆಂಬಾಶಯದಿಂದ ಒಬ್ಬೊಬ್ಬರು ಒಂದೊಂದು ರೀತಿ ಆ ಲಕ್ಷಣಗಳನ್ನು ಸೂಚಿಸುವರು. ಅವುಗಳಲ್ಲಿ ಗುರುವರ್ಗದ ಜಂಗಮರು ತಮ್ಮ ಮೂಲವನ್ನು ಹುಡುಕಲು ಅಸಮರ್ಥರಾಗಿ, ಕೊನೆಗೆ ಯಾವ ಐತಿಹಾಸಿಕ ಆಧಾರವೂ ಇಲ್ಲದ್ದಕ್ಕೆ ತಮ್ಮ ಪೂರ್ವಜರು `ಅನಾದಿ' ಕಾಲದಲ್ಲಿದ್ದರೆಂದೂ ಅವರಲ್ಲಿ ಐವರು `ಆದಿ' ಆಚಾರ್ಯರು ಕಲ್ಲಿನಲ್ಲಿ ಹುಟ್ಟಿಬಂದವರೆಂದೂ ಹೇಳುತ್ತಾರೆ. ಎಂದರೆ ತಮ್ಮ ಶ್ರೇಷ್ಠತೆಯ ತುತ್ತೂರಿಯನ್ನು ಊದಿಕೊಳ್ಳುವುದಕ್ಕೆ ``ದೈವೀ ಉತ್ಪತ್ತಿ"ಯನ್ನು ಹೇಳಿಕೊಳ್ಳುವುದು. ಇದು ಅನಾಗರಿಕವೂ ಶಿಲಾಯುಗದ ಜನತೆಗೆ ಸಂಬಂಧಿಸಿದ ಲಕ್ಷಣವೂ ಆಗಿರುತ್ತದೆ. ಬುಡಕಟ್ಟಿನ ಜನಾಂಗದವರು ಜಗತ್ತಿನ ಎಲ್ಲಾ ಕಡೆಗಳಲ್ಲಿ ತಮ್ಮ ಆದಿಯನ್ನು ಹುಡುಕಿಕೊಂಡು ಹೋಗಲು ಅಸಮರ್ಥರಾದಂದು ದೈವೀ ಉತ್ಪತ್ತಿಗೆ ಮೊರೆಹೊಕ್ಕುದನ್ನು ಸಾಮಾಜಿಕ ಮಾನವಶಾಸ್ತ್ರಜ್ಞರು ದಾಖಲಿಸಿದುದುಂಟು. ಅಂತಹ ದಾಖಲೆಗೆ ಗುರುವರ್ಗ ಕೈಹಾಕಿದಂತಿದೆ. ಈ ಗುರುವರ್ಗದ ಐವರ ಆಚಾರ್ಯರ ಹೆಸರು ಸಿಗುತ್ತವೆ. ಅವರ ಬಗ್ಗೆ ತಳಬುಡವಿಲ್ಲದ ಪವಾಡ, ಪುರಾಣ ಸಿಗುತ್ತವೆ. ಎಂದರೆ ಅವುಗಳ ಸಮರ್ಥನೆಗೆ ಪೋಷಕವಾಗುವ ಐತಿಹಾಸಿಕ ಖಚಿತ ಮತ್ತು ನಂಬಲರ್ಹವಾದ ವಿವರಗಳನ್ನು ಯಾರೂ ಕೊಡುವುದಿಲ್ಲ; ಕೊಡಬೇಕೆಂದರೆ ಸಿಗುವುದೂ ಇಲ್ಲದಾಗ ಅವರ ದಂತಕತೆಯನ್ನು ಬಳಸಿಕೊಂಡಿದ್ದಾರೆ. ಸಾಲದ್ದಕ್ಕೆ, ಈ ಐವರು ಆಚಾರ್ಯರ ಮಠಗಳ ಪೈಕಿ ಕರ್ನಾಟಕದಲ್ಲಿ ಎರಡು ಮಾತ್ರ ಮಠಗಳಿವೆ. ಉಳಿದವುಗಳೆಲ್ಲವೂ ಕರ್ನಾಟಕದ ಹೊರಗೆ, ಜೀರ್ಣ ಸ್ಥಿತಿಯಲ್ಲಿವೆ.

ಈ ಗುರುವರ್ಗಕ್ಕೆ ಸೇರಿದವರು ಶ್ರೇಷ್ಠವಾದಿಗಳೆಂದು ಅಲ್ಲಲ್ಲಿ ಕಾಣಿಸಿಕೊಂಡಿದ್ದಾರೆ. ಅವರಿಗೆ ವಿರಕ್ತರ ಬಗೆಗೆ, ಬಸವಣ್ಣನ ಬಗೆಗೆ, ಅಲ್ಲಮನ ಬಗೆಗೆ - ಯಾರೆಲ್ಲ ವಿಶ್ವವಾದಕ್ಕಾಗಿ, ಮಾನವ್ಯದ ಉದ್ಧಾರಕ್ಕಾಗಿ, ಬದುಕಿನ ಹಿರಿಯ ಮೌಲ್ಯಗಳಿಗಾಗಿ

ಬದುಕಿದರೊ-ಹನ್ನೆರಡನೆಯ ಶತಮಾನದಲ್ಲಿ ಬದುಕಿದ್ದ ಅವರು ತಮ್ಮ ತತ್ವಗಳಿಗೆಂದು ಜೀವಾರ್ಪಣೆ ಮಾಡಿದರೂ ಅಂಥವರನ್ನು ನಿಂದಿಸುತ್ತಾರೆ, ದ್ವೇಷಿಸುತ್ತಾರೆ, ಬಹಿರಂಗವಾಗಿಯೂ ತೆಗಳುತ್ತಾರೆ. ಮಠಗಳ ಅಭ್ಯಾಸಕ್ಕೆ ಸೇರಿದ ನನ್ನ ಟಿಪ್ಪಣಿ ಪುಸ್ತಕಗಳ ಉದ್ದಕ್ಕೂ ನಿಂದೆ, ದ್ವೇಷಗಳಿಂದ ತುಂಬಿದ ಅವರ ಪ್ರತಿಕ್ರಿಯೆಗಳು ದಾಖಲಾಗಿವೆ.

ವಿರಕ್ತರ ಗುಂಪಿನಲ್ಲಿ ಇರುವ ಜಗದ್ಗುರುಗಳಲ್ಲಿ ಕೆಲವರ ತಲೆಯನ್ನು ಉತ್ತಮವಾದ ಕೆಡಿಸಿದಂತಿದೆ. ವಿರಕ್ತರ ಮಠಗಳಲ್ಲಿರುವ ಪಡಸಾಲೆಯಲ್ಲಿ, ಎಲ್ಲಕ್ಕೂ ಮೇಲಿನ ಹಂತದಲ್ಲಿ ಜಂಗಮರು, ಅವರ ಕೆಳಗೆ ಅವರಿಗಿಂತಲೂ ಕಡಿಮೆಯಾದವರು, ಆಚೆಗೆ ಸಾಮಾನ್ಯರು ಕೂಡುವುದಕ್ಕೆ ಮೂರು ಹಂತಗಳಲ್ಲಿರುತ್ತವೆ. ಎಲ್ಲಕ್ಕೂ ಮೇಲಿನ ಹಂತದಲ್ಲಿರುವ ಪಡಸಾಲೆಯಲ್ಲಿ ಕೂಡುವವರು ಮಾಹೇಶ್ವರರು. ಅವರು ಪವಿತ್ರರು, ಉಳಿದವರು ಅಪವಿತ್ರರು. ಊಟ ಮಾಡುವಾಗ ಮಾಹೇಶ್ವರರಿಗೆ ಮೊದಲು ನೀಡಬೇಕು, ನಂತರ ಸಾಮಾನ್ಯರಿಗೆ. ಮಾಹೇಶ್ವರರು ಭಕ್ತರ ಜೊತೆಗೆ ಕುಳಿತು ಊಟ ಮಾಡುವುದಿಲ್ಲ. ಮಾಹೇಶ್ವರರಿಗೆ ದುಡ್ಡಿನ ಭಿಕ್ಷೆಯಾಗಬೇಕು, ಸಾಮಾನ್ಯರು ಅವರಿಗೆ ಕೊಡಬೇಕು. ಕೊಡದಿದ್ದರೆ ಮುಂದಿನ ಜನ್ಮದಲ್ಲಿ ಇನ್ನೂ ಕೆಳಗಿನ ಪಂಕ್ತಿಯಲ್ಲಿ ಹುಟ್ಟಿಬರುತ್ತಾರೆ, ಎಂದು ಮಾಹೇಶ್ವರರ ಅಭಿಪ್ರಾಯ.

ಜಾತಿಯ ಮೂರನೆಯ ಲಕ್ಷಣವು `ಹುಟ್ಟಿನಿಂದ ಶ್ರೇಯ' ಎಂಬ ಸೂತ್ರವನ್ನಾಧರಿಸಿದೆ. ಎಂದರೆ ಹುಟ್ಟಿನಿಂದ ಜಂಗಮನಾಗುತ್ತಾನೆ, ಗುಣದಿಂದಲ್ಲ ಎಂಬ ಖಚಿತ ನಂಬುಗೆಯನ್ನು ಸಮಕಾಲೀನ ಜಂಗಮನು ತಳೆದಂತಿದೆ. ಗುರು-ಜಂಗಮನೊಬ್ಬನೆ ಅಲ್ಲ, ವಿರಕ್ತ ಜಂಗಮ, ಅವರ ಕೆಳಗಡೆ ಇರುವ `ಸಾಮಾನ್ಯ ಜಂಗಮ'ರೆಲ್ಲ ತಾವು ಹುಟ್ಟಿನಿಂದ ಬಂದ ಉತ್ತಮರು ಎಂದು ತಿಳಿದಿದ್ದಾರೆ. ಹಳ್ಳಿಯ ಗಿಡಗಂಟೆಗಳಲ್ಲಿ, ಹೊಲ ಗದ್ದೆಗಳ ಅಂಚಿನಲ್ಲಿ - ಎಲ್ಲಿ ಬೇಕೆಂದರೆ ಅಲ್ಲಿ ಅಡಗಿಕೊಂಡ, ತಲೆಯೆತ್ತಿದ, ಕಲ್ಲುಗಳನ್ನು ಪೂಜಿಸುವ ಪೂಜಾರಿಗೆ `ಸ್ವಾಮಿ' ಎಂದು `ಸಾಮಾನ್ಯರಾದ ಲಿಂಗಾಯತರು' ಕರೆಯುವುದನ್ನು ಕರ್ನಾಟಕದ ಉದ್ದಗಲಕ್ಕೂ ಕಾಣಬಹುದಾಗಿದೆ. ಈ ಜಂಗಮರೆಲ್ಲರ ಒಂದು ಪವಿತ್ರ ಪಾತ್ರವೆಂದರೆ ದೇವರ ಪೂಜೆ, ಅಥವಾ ಅರ್ಚನೆ. ಜನನ ಕಾರ್ಯ, ಮದುವೆ, ಮರಣಕಾಲದಲ್ಲಿ ಇವರ ಪಾವಿತ್ರ್ಯದ ಪಾತ್ರ ಸ್ಪಷ್ಟವಾಗಿರುತ್ತದೆ. ಹಬ್ಬಗಳಲ್ಲಿ ಮನೆಗೆ ಪೂಜೆಗೆಂದು ಕರೆದ ಜಂಗಮನ ಪಾದ ತೊಳೆದು, ತೊಳೆದ ನೀರಿನಿಂದ ಇಷ್ಟಲಿಂಗದ ಮೇಲೆ ಎರೆಯುವುದರ ಜೊತೆಗೆ, ಬಾಯಲ್ಲಿ ಹಾಕಿಕೊಳ್ಳುವುದೂ ಮನೆಯ ಪಾವಿತ್ರ್ಯಕ್ಕೆಂದು ಸಿಂಪಡಿಸುವುದೂ ಆ ಪಾವಿತ್ರ್ಯದ ದ್ಯೋತಕವಾಗಿದೆ. ಲಿಂಗಾಯತನು ಮರಣ ಹೊಂದಿದಾಗ ದೇವರಾಗುತ್ತಾನೆ ಎಂಬ ನಂಬುಗೆ ಲಿಂಗಾಯತರದು. ಆ ದೇವರ ತಲೆಯ ಮೇಲೆ ಕಾಲಿಟ್ಟು ಅವನನ್ನು `ಪವಿತ್ರಗೊಳಿಸುವ' ಜಂಗಮನು `ದೇವರ ದೇವ'ನೇ ಆಗಿರುವನು. ಕಾಲಕ್ರಮದಲ್ಲಿ, ಲಿಂಗದೇವನನ್ನು, ಗುರು ದೇವನನ್ನು ಅದುಮಿ, ತಾನೇ `ದೇವರ ದೇವರು' ಆಗಿರುವ ಜಂಗಮನು `ಜಂಗಮ' ಮೂಲ ಅರ್ಥದಿಂದ ದೂರವಾಗಿ ಜಂಗಮತ್ವವನ್ನು ಮಾತ್ರವೇ ಅಲ್ಲ, ಲಿಂಗಾಯತ ಧರ್ಮವನ್ನೆ

ವಿಕೃತಗೊಳಿಸಿದ್ದಾನೆಂದು ಸಮಕಾಲೀನ ಬುದ್ಧಿವಂತರಲ್ಲಿ ಕೆಲವರು ಇತ್ತೀಚೆಗೆ ಸ್ಪಷ್ಟವಾಗಿ ಮಾತನಾಡುವುದನ್ನು ನಾನು ಗುರುತಿಸಿದ್ದೇನೆ.

ಹುಟ್ಟು ಮುಖ್ಯವಲ್ಲ, ಗುಣ ಮುಖ್ಯ, ನಡೆವಳಿಕೆ ಮುಖ್ಯ ಎಂದು ಹೇಳಿಕೊಂಡು ಭಕ್ತನು ಜಂಗಮನಾದ 'ಆ ಭಕ್ತ-ಜಂಗಮ'ನನ್ನು ಸಮಕಾಲೀನ ಜಂಗಮ ಜಾತಿಗೆ ಸೇರಿದವರು ತಿರಸ್ಕಾರ, ಜಿಗುಪ್ಸೆಗಳಿಂದ ಕಂಡುದನ್ನು ನಾನು ಪ್ರತ್ಯಕ್ಷ ಗುರುತಿಸಿದ್ದೇನೆ.

ಹೀಗೆ ಉತ್ತಮವಾದವನ್ನು ಸ್ಥಾಪಿಸುವುದಕ್ಕೆಂದು ಶ್ರೇಷ್ಠತೆ, ದೈವೀ ಉತ್ಪತ್ತಿಯನ್ನು ಹೇಳಿಕೊಂಡು ಹೋಗುವವರು, ತಮ್ಮ ಅಗ್ಗಳಿಕೆಯನ್ನು ಮೆರೆಯುವುದಕ್ಕೆಂದು ಹುಡುಕಿಕೊಂಡು ಹೋದ ಇನ್ನೊಂದು ಸಾಧನ ಸಂಸ್ಕೃತ ಭಾಷೆಯ ಬಳಕೆಯಾಗಿದೆ. ವಿಶೇಷವಾಗಿ ಗುರುವರ್ಗದವರು ಮಠ ಕಟ್ಟುವುದರ ಜೊತೆಗೆ, ಅದರ ಜೊತೆಯಲ್ಲಿ ಸಂಸ್ಕೃತ ಪಾಠಶಾಲೆಯನ್ನೂ, ವೇದಾಭ್ಯಾಸ, ವ್ಯಾಕರಣಗಳನ್ನು ಪ್ರಚುರಪಡಿಸುವುದಕ್ಕೆ ಪ್ರಾಥ್ಯಮಿಕ ಶಾಲೆ, ಸಂಸ್ಕೃತ ಕಾಲೇಜುಗಳನ್ನು ನಡೆಸುತ್ತ ಬಂದಿದ್ದು, ಅವರೆಲ್ಲರೂ ಈ ವಿಷಯದಲ್ಲಿ ಬ್ರಾಹ್ಮಣರಿಗಿಂತಲೂ ಹೆಚ್ಚಿನ ಬ್ರಾಹ್ಮಣರಾಗಿ ತೋರಬಯಸಿದ್ದಾರೆ. ಮಾತ್ರವಲ್ಲ, ಬ್ರಾಹ್ಮಣ್ಯದ ಅನುಕರಣ ಮಾಡಿದ್ದನ್ನು ಗುರುತಿಸಿದ (ಬ್ರಾಹ್ಮಣ) ಸಮಾಜವಿಜ್ಞಾನಿಗಳು ಲಿಂಗಾಯತರಲ್ಲಿ ಬ್ರಾಹ್ಮಣರಾಗುವುದಕ್ಕೆಂದು ಬ್ರಾಹ್ಮಣ್ಯದ ಅನುಕರಣ ಮಾಡಿದ್ದನ್ನು ಸೂಚಿಸಿದ್ದಾರೆ. ಇಂತಹ ಸಂಸ್ಕೃತ ಪಾಠಶಾಲೆಗಳು ಬರೀ ಗುರುವರ್ಗದ ಜಂಗಮನಿಗೆ ಮಾತ್ರ ಮೀಸಲಾಗಿರದೆ ವಿರಕ್ತ ಜಂಗಮರಿಗೂ ಸಂಸ್ಕೃತದ ಹುಚ್ಚು ಹಿಡಿಸಿವೆಯೆನ್ನುವುದಕ್ಕೆ ಧಾರವಾಡ, ಗದಗ, ಹುಬ್ಬಳ್ಳಿ, ಸಿರಿಗೆರೆ, ಸಿದ್ಧಗಂಗಾ, ಪುತ್ತೂರು ಮಠಗಳ ಜಂಗಮರು ಉಡುಪಿಯ ಅಷ್ಟಮಠಾಧೀಶರಿಗು ಮೀರಿದ ಸಂಸ್ಕೃತ ಮೋಹವನ್ನು ಸಂಸ್ಕೃತ ಶಾಲೆಗಳ ಸ್ಥಾಪನೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಸಾಲದ್ದಕ್ಕೆ ಈ ಎಲ್ಲ ಜಂಗಮರು ತಮ್ಮ ಅಂಕಿತವನ್ನು 'ಇತ್ಯಾಶಿಷಃ' ಎಂಬ ಅಂಕಿತದಲ್ಲಿ ಮಾಡುವ ಸಹಿಯನ್ನು ದೇವನಾಗರಿ ಲಿಪಿಯಲ್ಲಿ ಹಾಕುತ್ತಾರಲ್ಲದೆ ಕನ್ನಡದಲ್ಲಿ ಅಲ್ಲ ಎನ್ನುವುದನ್ನು ನಾನು ಪ್ರತ್ಯಕ್ಷ ನೋಡಿದ್ದೇನೆ.

ಉತ್ತಮವಾದ, ಶ್ರೇಷ್ಠತೆಯನ್ನು ಮೆರೆಯುವ ಜಾತಿವಾದಗಳ ವಿರುದ್ಧ ಬಸವಣ್ಣನು ಬಂಡು ಎಬ್ಬೆಸಿದ. ಉತ್ತಮ ಕುಲದಲ್ಲಿ ಹುಟ್ಟಿಬಂದ ಹೊರೆಯಿಂದ ತನ್ನನ್ನು ಪಾರುಮಾಡಬೇಕೆಂದು ಬಸವಣ್ಣನು ತನ್ನ ಇಷ್ಟಲಿಂಗದಲ್ಲಿ ಬೇಡಿಕೊಂಡನು. ಲೋಕದಲ್ಲಿ ತಾನೊಬ್ಬನೆ ಭಕ್ತ, ಉಳಿದವರೆಲ್ಲರೂ ಜಂಗಮರು, ಶ್ರೇಷ್ಠರು ಎಂದು ವಿನಯದಿಂದ ಅವನು ಪ್ರಾರ್ಥಿಸಿದನು. ಆದರೆ ಸಿಂಹಾಸನದ ಮೇಲೆ ಕಿರೀಟ ಹಾಕಿಕೊಂಡು ಕುಳಿತ ಜಂಗಮನ ದೃಷ್ಟಿ, ಭಕ್ತರು ಬಂದಾಗ ಕಾಲು ಚಾಚಿ ಪಾದಕ್ಕೆ ಹಣೆ ಹಚ್ಚಿಸಿಕೊಳ್ಳುವ ನಮ್ಮ ಆಧುನಿಕ ಜಂಗಮನ ಮೌಲ್ಯ, ''ಆ ಮಠಕ್ಕಿಂತಲೂ ನಮ್ಮ ಮಠ ದೊಡ್ಡದು. ನಾನು ಕೂಡುವ ಆಸನ ಅವರಿಗಿಂತಲೂ ಎತ್ತರವಾಗಿರಬೇಕು'' ಎಂದು ಉತ್ತಮತೆಯನ್ನು ವ್ಯಕ್ತಪಡಿಸುವ ಜಂಗಮನ ಸಂಸ್ಕೃತಿ ಲಿಂಗಾಯತನ ಧರ್ಮಕ್ಕೆ ಹೊರಗಾಗಿದೆ.

ಹೀಗೆ ವಿಕೃತ ಸ್ವರೂಪಕ್ಕೆ ಈಡಾಗಿರುವ ಸಮಕಾಲೀನ ಜಂಗಮನ ನಡೆವಳಿಕೆಯನ್ನು ತಿದ್ದುವಲ್ಲಿ ಉಪಯೋಗವಾಗಬಹುದಾದ ಸಲಹೆಗಳು ಏನೆಂದು ಕೇಳುವವರಿಗೆ ಕೆಳಗಿನ ಪರಿಹಾರವನ್ನು ಸೂಚಿಸಬಹುದಾಗಿದೆ.

ಬಸವಣ್ಣನು ಕನ್ನಡದಲ್ಲಿ ವಚನಗಳನ್ನು ಬರೆದನು. ಸಂಸ್ಕೃತವನ್ನೂ ಚೆನ್ನಾಗಿ ಓದಿ ಬಲ್ಲ ಆತನು ತನ್ನ ವಚನಗಳಲ್ಲಿ ಮೇಲಿಂದ ಮೇಲೆ ಸಂಸ್ಕೃತದಲ್ಲಿನ ಧಾರ್ಮಿಕ ಗ್ರಂಥಗಳಿಂದ ಉದ್ಧರಿಸುತ್ತಾನೆ. ಆದರೆ ಬಸವಣ್ಣನ ಪಾಲಿಗೆ, ಶರಣರ ಪಾಲಿಗೆ ಸಂಸ್ಕೃತ ಜನಸಾಮಾನ್ಯರ ಭಾಷೆಯಾಗಿರಲಿಲ್ಲ, ಅದು ಪವಿತ್ರರ ಭಾಷೆ, ದೇವಭಾಷೆ ಆಗಿದ್ದಿತು. ಈ ಭಾಷೆ ಬ್ರಾಹ್ಮಣ ವ್ಯವಸ್ಥಾ ಪದ್ಧತಿ, ಎಂದರೆ ವರ್ಣಾಶ್ರಮ ಪದ್ಧತಿಯನ್ನು ಸಮರ್ಥಿಸುತ್ತಿದ್ದುದರಿಂದ ಶರಣರಾಗಲಿ, ಬಸವಣ್ಣನಾಗಲಿ ಅದನ್ನು ಬಳಕೆಗಾಗಿ ಉಪಯೋಗಿಸಲಿಲ್ಲವಷ್ಟೆ ಅಲ್ಲ, ಆ ಭಾಷೆಯನ್ನು ವಿರೋಧಿಸಿದರು. ಅವರು ಸಂಸ್ಕೃತ ದ್ವೇಷಿಗಳಾಗಿರಲಿಲ್ಲ, ಸಂಸ್ಕೃತವು ಸಮರ್ಥಿಸಿಕೊಂಡು ಬಂದ ವ್ಯವಸ್ಥಾ ಪದ್ಧತಿಯ ವೈರಿಗಳಾಗಿದ್ದರು. ಹಾಗಿದ್ದರೂ ಕಳೆದ ಅರ್ಧ ಶತಮಾನದ ಅವಧಿಯಲ್ಲಿ ಲಿಂಗಾಯತ ಜಂಗಮನು ಸಂಸ್ಕೃತ ಭಾಷೆಗಷ್ಟೆ ಅಲ್ಲ, ವೇದಗಳ ಪಾಂಡಿತ್ಯಕ್ಕೆ ತೋರಿದ ಮೋಹ ತಮ್ಮ ಧರ್ಮದ ಬಗೆಗೆ ಅವರಿಗಿರುವ ಅಜ್ಞಾನವನ್ನೂ ಜೊತೆಗೆ ಉತ್ತಮವಾದದಲ್ಲಿ ಅವರಿಗಿದ್ದ ಅಭಿಲಾಷೆಯನ್ನೂ ವ್ಯಕ್ತಪಡಿಸುತ್ತದೆ.

ಗುಂಪುಗಾರಿಕೆ ಮತ್ತು ಜಾತೀಯತೆ ಇಲ್ಲವೆ ಜಾತಿವಾದವು ಎಲ್ಲೆಲ್ಲಿ ಕಾಣಿಸಿಕೊಳ್ಳುತ್ತದೆಯೊ ಅದೆಲ್ಲವೂ ಜಾತಿಯ ದುಷ್ಟ ಅಥವಾ ಅಪಾಯಕಾರಿ ಲಕ್ಷಣವಾಗಿದೆ. ಧರ್ಮವು ಸಮಾಜವನ್ನು ಒಂದುಗೂಡಿಸಿದರೆ, ಜಾತಿಯತೆಯು ಸಮಾಜವನ್ನು ಒಡೆದುಹಾಕುತ್ತದೆ. ಧರ್ಮವು ಸಾರ್ವತ್ರಿಕ ವಾದವನ್ನು ಸಮರ್ಥಿಸಿಕೊಂಡು ಹೋದರೆ, ಜಾತಿವಾದವು ಸ್ವಕೀಯತೆ, ಪಕ್ಷೀಯತೆಗಳನ್ನು ಸಮರ್ಥಿಸುವುದು. ಧರ್ಮವು ವಿಶ್ವಮಾನ್ಯವಾದ ಸತ್ಯದ ಕಡೆಗೆ ಬೆರಳಿಟ್ಟು ತೋರಿಸಿದರೆ, ಜಾತಿವಾದವು 'ತನಗೊಂದು ಮತ್ತು ತನ್ನವರಿಗೊಂದು ನ್ಯಾಯ, ಇತರರಿಗೊಂದು ನ್ಯಾಯ' ಎಂದು ಪ್ರತಿಪಾದಿಸುತ್ತದೆ.

ಲಿಂಗಾಯತ ಧರ್ಮದ ಆರಂಭ, ಬೆಳವಣಿಗೆಯ ಇತಿಹಾಸವನ್ನು ಬರೆಯುವಲ್ಲಿಯೂ ಜಂಗಮರು ಗುಂಪುಗಾರಿಕೆಗೆ ಸೇರಿದ ಮನೋವೃತ್ತಿಯನ್ನು ವ್ಯಕ್ತಪಡಿಸಿದಂತಿದೆ. ಆ ಇತಿಹಾಸದ ವಿವೇಚನೆಯನ್ನು ವಿರಕ್ತ-ಜಂಗಮ ಪ್ರೇಮಿಗಳು ವಿರಕ್ತನ ದೃಷ್ಟಿಯಿಂದ, ಗುರುವರ್ಗದ ಕಡೆಯವರು ಅವರ ದೃಷ್ಟಿಯಿಂದ ಮಾಡಿದಂತಿದೆ. ಸಾಹಿತ್ಯದ ಪರಾಮರ್ಶೆಯ ಕಾರ್ಯದಲ್ಲಿ ವಿಮರ್ಶಕನಾದವನು ಸ್ವಕೀಯ ದೃಷ್ಟಿಯನ್ನೂ ಪಕ್ಷೀಯ ಮನೋಭಾವನೆಯನ್ನೂ ಮೀರಿ ನಿಂತವನಾಗಿರಬೇಕಾಗುತ್ತದೆ.

## ಧಾರ್ಮಿಕದಿಂದ ಭೌತಿಕ ಜಗತ್ತಿನೆಡೆಗೆ

ಜಂಗಮ ಸಮುದಾಯವು ಆಸ್ತಿ, ಸಂಪತ್ತುಗಳನ್ನು ಸಂವರ್ಧಿಸಿಕೊಂಡು ಧರ್ಮಕಾರ್ಯವನ್ನು

ಮರೆಯಲಾರದೆಂದೇ ಬಸವಣ್ಣನು ಜಂಗಮನನ್ನು `ಸಂಚಾರಿ ಜೀವ' ವೆಂದು ಕರೆದನು. ಒಂದು ಕಡೆ ನೆಲೆನಿಲ್ಲದೆ ಸದಾವಕಾಲವೂ ಸಂಚರಿಸುತ್ತ ಧರ್ಮ ಪ್ರಸಾರವನ್ನು ಸಾಧಿಸುವುದಕ್ಕೆಂದೇ ಅವನು ಜಂಗಮ ಸಮುದಾಯವನ್ನು ಸಂಘಟಿಸಿದನೆಂಬ ವಿಚಾರವನ್ನು ಈ ಪೂರ್ವದಲ್ಲಿ ತಿಳಿಸಲಾಗಿದೆ. ಕಾಳಾಮುಖರು ಕಟ್ಟಿದ ಭವ್ಯ ದೇವಾಲಯಗಳೂ ಆರ್ಥಿಕ ಸಂಪತ್ತಿನೊಂದಿಗೆ ಭದ್ರತೆಯನ್ನು ಸಂಪಾದಿಸಿದ ಅವರ ಮಠಗಳೂ ಜಡತ್ವಕ್ಕೆ ಕಾರಣವಾದುದನ್ನು ಅವನು ತಿಳಿದುಕೊಂಡಿದ್ದನು. ಕಾಳಾಮುಖರ ಧಾರ್ಮಿಕ ಸಂಸ್ಥೆಗಳು ಆರ್ಥಿಕ ದೃಷ್ಟಿಯಿಂದ ಪ್ರಬಲವಾಗಿ ಬೆಳೆದ ಸಮಯದಲ್ಲಿ ಅವರ ಆಚಾರ್ಯರ ನೈತಿಕ ಮಟ್ಟವು ಹೀನ ಸ್ಥಿತಿಗೆ ಇಳಿದಿತ್ತೆನ್ನುವುದಾಗಿ ಆತನಿಗೆ ಪರಿಚಯವಾಗಿದ್ದಿತು. ಈಗ ಅಂಥ ಪರಿಸ್ಥಿತಿ ತನ್ನ ಸಮಾಜಕ್ಕೆ ಬಾರದಿರಲಿ ಎಂದು ಅಪೇಕ್ಷಿಸಿದ ಬಸವಣ್ಣ ಕಟ್ಟುನಿಟ್ಟುಗಳಿಂದೊಡಗೂಡಿದ ಜಂಗಮ ವ್ಯವಸ್ಥೆಯ ರಚನೆಗೆ ಕೈ ಹಾಕಿದ್ದನು.

ಆದರೆ ಐತಿಹಾಸಿಕ ಒತ್ತಡಗಳಿಗೆ ಮಣಿದ ಲಿಂಗಾಯತ ಧರ್ಮವು ಹದಿನೈದನೆಯ ಶತಮಾನದ ಹೊತ್ತಿಗೆ ಮೆಲ್ಲಮೆಲ್ಲನೆ ದೇವಾಲಯಗಳನ್ನೂ ದಾನದತ್ತಿಗಳನ್ನೂ ಸ್ವೀಕರಿಸಲು ಆರಂಭಿಸಿದ್ದಿತೆನ್ನುವುದನ್ನು ಆ ಕಾಲದ ಶಾಸನಗಳು ಸೂಚಿಸುತ್ತವೆ. ಕಾಲಕ್ರಮದಲ್ಲಿ ಗುರು-ಜಂಗಮರೂ ವಿರಕ್ತ-ಜಂಗಮರೂ ಆ ನಡೆವಳಿಕೆಗಳನ್ನು ಬೆಳಸಿಕೊಂಡು ಲಿಂಗಾಯತನ ಧರ್ಮವನ್ನು ಧಾರ್ಮಿಕ ಪ್ರಪಂಚದಿಂದ ಭೌತಿಕ ಜಗತ್ತಿನೆಡೆಗೆ ಕರೆದೊಯ್ದುದನ್ನು ಬಸವೋತ್ತರ ಕಾಲದ ಇತಿಹಾಸವು ತಿಳಿಸುತ್ತದೆ.

ಸಮಕಾಲೀನ ಕರ್ನಾಟಕದಲ್ಲಿ ಗುರು - ಜಂಗಮ ಹಾಗೂ ವಿರಕ್ತ-ಜಂಗಮರಿಬ್ಬರೂ ಆ ಉದ್ದ ಈ ಉದ್ದ ಬೆಳೆದಿರುವ ಬಿರುದು ಬಾವಲಿಗಳನ್ನು, ಜಗತ್ತಿನ ಗುರು (ಜಗದ್ಗುರು)ವೆಂಬ ಕಟ್ಟುವ ಕಾರ್ಯದಲ್ಲಿ ವಿಶೇಷ ಅಪೇಕ್ಷೆಗಳನ್ನು ತಳೆದವರಾಗಿರುವರೆಂಬುದಕ್ಕೆ ಅನೇಕ ದೃಷ್ಟಾಂತಗಳು ದೊರೆಯುತ್ತವೆ. ಎಲ್ಲೆಲ್ಲಿ ಅವರು ಆಸ್ತಿಪಾಸ್ತಿಗಳನ್ನು ಕಟ್ಟಿ ಬೆಳಸಿದ್ದಾರೊ ಅಲ್ಲಲ್ಲಿ ಲೌಕಿಕಕ್ಕೆ ಸೇರಿದ ಆಸೆ, ಅಪೇಕ್ಷೆ ಮತ್ತು ಅನುರಕ್ತಿಗಳು ಬೆಳೆದುಕೊಂಡದ್ದು ಕಂಡುಬರುತ್ತದೆ. ಈ ಶತಮಾನದ ಉತ್ತರಾರ್ಧದಲ್ಲಿ ಜಂಗಮ ಸಂಸ್ಥೆಯ ಸುತ್ತಲೂ ಶೀಘ್ರಗತಿಯಿಂದ ಬೆಳೆದ ಶಿಕ್ಷಣ ಸಂಸ್ಥೆಗಳು ಹಳ್ಳಿಗಾಡಿನ ಬದುಕಿನಲ್ಲಿ ಶಿಕ್ಷಣದ ಅನುಕೂಲತೆಗಳನ್ನು ಒದಗಿಸಿಕೊಡುವುದರ ಜೊತೆಗೆ ವಿದ್ಯಾರ್ಥಿಗಳಿಂದ ಪ್ರವೇಶಧನವನ್ನು ಧಾರಾಳವಾಗಿ ಪಡೆಯುತ್ತ ಶಿಕ್ಷಣವನ್ನು ಮಾರಾಟಕ್ಕೆ ಹಚ್ಚಿವೆ.

ಬಸವಣ್ಣನು ಯಾವುದಕ್ಕೆ `ಬೇಡ, ಬೇಡ'ವೆಂದನೊ, ಯಾವ ಸುದ್ದಿಯನ್ನು ಕೇಳಬಾರದೆಂದು ಬಯಸಿದ್ದನೊ ಅದೆಲ್ಲ ಜಂಗಮ ಪ್ರಪಂಚದಲ್ಲಿ ಕಾಣಿಸಿಕೊಂಡಿದೆ. ಅಷ್ಟರಮಟ್ಟಿಗೆ ಸಮಕಾಲೀನ ಜಂಗಮನ ವಾಸ್ತವಿಕ ಚಿತ್ರ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು ವಿಪರೀತ ಸ್ಥಿತಿಯನ್ನು ಹೊಂದಿದೆ. ಆದರೆ ಅಪವಾದಗಳು ಯಾವುದಕ್ಕೆ ಇಲ್ಲ ಎನ್ನುವಂತೆ ಆದರ್ಶ ಜಂಗಮತ್ವವನ್ನು ಕಾಯ್ದುಕೊಂಡು ಬಂದ ಜಂಗಮರು ಇದ್ದಾರೆ. ಅವರಿಂದಾಗಿಯೇ ಲಿಂಗಾಯತ ಧರ್ಮದಲ್ಲಿ ಆದರ್ಶ ಜಂಗಮತ್ವಕ್ಕೆ ಸೇರಿದ

ಗುಣಗಳು ಈ ಕಾಲದಲ್ಲಿ ರಕ್ಷಿತವಾಗಿದ್ದು, ಅವು ಬದಲಾವಣೆ ಮತ್ತು ಪರಂಪರೆಯ ಸಹಜೀವನಕ್ಕೆ ಇಂಬು ಕೊಟ್ಟಿವೆ.

## ಜಂಗಮತ್ವದ ಪುನರ್‌ರಚನೆ: ಪರಿಹಾರ

ನನಗೆ ತಿಳಿದಂತೆ ಆದರ್ಶ ಜಂಗಮನ ನಡತೆ ಈಗ ನಶಿಸತೊಡಗಿದೆ. ಅದರ ಪುನರ್ ರಚನೆಗೆ `ಪೆರೆಸ್ಟ್ರೊಯಿಕಾ'ಕ್ಕೆಂದು ನಾನು ಸೂಚಿಸುವ ಪರಿಹಾರಗಳು ಕೆಳಗಿನಂತಿವೆ.

ಮೊದಲನೆಯದಾಗಿ ಲಿಂಗಾಯತ ಧರ್ಮದಲ್ಲಿ ಈಗ ಕಾಣಿಸಿಕೊಂಡಿರುವ ಪುರೋಹಿತನ ಪಾತ್ರವನ್ನು ಲಿಂಗಾಯತರು ನಿರ್ಮೂಲನ ಮಾಡಬೇಕು. ಎಂದರೆ ಅಯ್ಯ ಮತ್ತು ಜಂಗಮ ಎಂದು ಕರೆಸಿಕೊಳ್ಳುವುದಕ್ಕೆ ಹುಟ್ಟು ಕಾರಣವಾಗದಂತೆ ಮಾಡುವುದು ಅಗತ್ಯ. ಆ ಕಾರ್ಯಸಾಧನೆಗಾಗಿ ಸಮಕಾಲೀನ ಮಠಗಳು ಭಕ್ತರನ್ನು ಜಂಗಮರನ್ನಾಗಿ ತರಬೇತುಗೊಳಿಸುವ ಶಾಲೆಗಳನ್ನು ತೆರೆಯಬೇಕು. ಅವರಲ್ಲಿ ಹರಿಜನರಿಂದ ಮೊದಲುಗೊಂಡು ಎಲ್ಲ ಜಾತಿಯ ಜನರಿಗೂ ಅಯ್ಯ ಇಲ್ಲವೆ ಜಂಗಮನಾಗುವ ಅರ್ಹತೆಯನ್ನು ಪಡೆಯುವ ಶಿಕ್ಷಣ ಒದಗಿಸುವುದು ಅಗತ್ಯವಿದೆ. ಹಾಗಾದಾಗ ಈಗ ಹುಟ್ಟಿನಿಂದ, ವಂಶಪರಂಪರಾನುಗತವಾಗಿ ಹಕ್ಕುಬಾಧ್ಯತೆಗಳನ್ನು ಸಾಧಿಸಿಕೊಂಡು ಬಂದ ಜಂಗಮನು ಕಾಲಾಂತರದಲ್ಲಿ ಕಣ್ ಮರೆಯಾಗಿ ಪುರೋಹಿತವರ್ಗದ ನಿರ್ಮೂಲನಕ್ಕೆ ಅವಕಾಶ ಮಾಡಿಕೊಡುವನು.

ಎರಡನೆಯದಾಗಿ ಮಠದ ಪೀಠಕ್ಕೆ ಆರಿಸುವ ಜಂಗಮನು ಆಧುನಿಕ ಮನೋವೃತ್ತಿಯುಳ್ಳವನೂ ಆಧುನಿಕ ಶಿಕ್ಷಣದ ಜೊತೆಗೆ ಲಿಂಗಾಯತ ಧರ್ಮದ ಮತ್ತು ಇತರ ಧರ್ಮಗಳ ಬಗೆಗಿನ ತಿಳಿವಳಿಕೆಯನ್ನು ಶಾಸ್ತ್ರೋಕ್ತವಾಗಿ ಪಡೆದವನಿರಬೇಕು. ಇದರಿಂದ ಮಠವನ್ನು ಕಟ್ಟುವಲ್ಲಿ, ಬೆಳೆಸುವಲ್ಲಿ ನೈತಿಕ ಹಾಗೂ ಶೈಕ್ಷಣಿಕ ಸಾಧನೆಗಳು ನೆರವಾಗುವವು.

ಮೂರನೆಯದಾಗಿ, ಮಠದ ಆಸ್ತಿಪಾಸ್ತಿಗಳು ಮಠಾಧೀಶನ ಕುಟುಂಬದವರಿಗಾಗಲಿ ಅಥವಾ ಅವನ ಸ್ವಂತದ ಉಪಯೋಗಕ್ಕಾಗಲಿ ವ್ಯಯವಾಗದಂತೆ ನಿಯಂತ್ರಿತವಾಗಬೇಕು. ಅಧಿಕಾರಕ್ಕೆ ಬಂದ ಸಾರ್ವಜನಿಕರು ದುರುಪಯೋಗಪಡಿಸದಂತೆ ಜಂಗಮನು ತನ್ನ ಸ್ವಂತಕ್ಕಾಗಿ ಬಳಸದಂತೆ ಯೋಜನೆಗಳನ್ನು ಹುಡುಕಿಕೊಂಡು ಮಠವು ಆಸ್ತಿ ಮಾಡುವ ಸಂಸ್ಥೆಯಾಗದಂತೆ, ಸಾಲ ಕೊಡುವ ಬ್ಯಾಂಕು ಆಗದಂತೆ ನೋಡಿಕೊಳ್ಳುವುದು ಅಗತ್ಯವಾಗಿದೆ.

ನಾಲ್ಕನೆಯದಾಗಿ ಮಠದ ಶೈಕ್ಷಣಿಕ ಸಂಸ್ಥೆಗಳಿಂದ ಜಂಗಮರನ್ನು ದೂರವಾಗಿಡಬೇಕು. ಸದ್ಯದ ಪರಿಸ್ಥಿತಿಯಲ್ಲಿ ನಮ್ಮ ಬಹುಸಂಖ್ಯಾತ ಜಂಗಮರು ಪೇಟೆಯಲ್ಲಿ ಅಂಗಡಿ ಮಾಡಿಕೊಂಡ ಶೆಟ್ಟಿಗಳಂತೆ ಒಂದು ಕಡೆ ರೊಕ್ಕದ ಡಬ್ಬಿ, ಇನ್ನೊಂದು ಕಡೆ ಟೆಲಿಫೋನು ಇಟ್ಟುಕೊಂಡು ``ಪಿರಿದಪ್ಪ ಶೆಟ್ಟಿ''ಗಳಾಗಿದ್ದಾರೆ. ವಿದ್ಯಾರ್ಥಿಗಳ ಪ್ರವೇಶ, ಅಧ್ಯಾಪಕರ ನೌಕರಿ, ಹಣದ ಸ್ವೀಕಾರ ಇವುಗಳಿಂದ ಜಂಗಮನನ್ನು ದೂರವಿರಿಸಿರಿ.

ಐದನೆಯದಾಗಿ ಮಠಗಳ ಮತ್ತು ಅವುಗಳ ನೇತೃತ್ವದಲ್ಲಿ ನಡೆಯುವ ಧಾರ್ಮಿಕ ಮತ್ತು ಶೈಕ್ಷಣಿಕ ಸಂಸ್ಥೆಗಳ ಆಡಳಿತ ಮಂಡಳಿಯನ್ನು ರಚಿಸಿ ಅದು ಮಠ ಮತ್ತು ಶಿಕ್ಷಣ ಪ್ರಪಂಚಗಳಿಗೆ ಸೇರಿದ ದಕ್ಷ ಪ್ರತಿನಿಧಿಗಳಿಂದ ಸಂಯೋಜಿತವಾಗಿರಬೇಕಲ್ಲದೆ, ಆ ಮಂಡಳಿಯ ಸುವ್ಯವಸ್ಥಿತ ಆಡಳಿತಕ್ಕೆಂದು ಕಾನೂನುಬದ್ಧವಾದ ಸೂತ್ರಗಳು ರಚಿತವಾಗಿರಬೇಕು.

ಆರನೆಯದಾಗಿ ಆಡಳಿತ ಮಂಡಳಿಯ ಅಧಿಕಾರದ ಅವಧಿ ಮೂರು ವರುಷಕ್ಕಿಂತ ಮಿಕ್ಕಿರಬಾರದು. ಹೆಚ್ಚಿದ್ದರೆ ದುರಾಡಳಿತ ಮತ್ತು ಶೋಷಣೆಗೆ ಅವಕಾಶ ಮಾಡಿಕೊಟ್ಟಂತಾಗುವುದು. ಅದಲ್ಲದೆ ಜಂಗಮರ ನಿವೃತ್ತ ಅವಧಿಯನ್ನು ನಿರ್ದಿಷ್ಟವಾಗಿ ಗೆರೆ ಕೊರೆದಂತೆ ಸೂಚಿಸಬೇಕಲ್ಲದೆ, ಆ ಅವಧಿ ಸಾರ್ವಜನಿಕ ಅಧಿಕಾರಿಗಳ ನಿವೃತ್ತಿಯ ಅವಧಿಗೆ ಸರಿಸಮನಾಗಿರಬೇಕು.

ಕೊನೆಯದಾಗಿ, ಜಂಗಮನನ್ನು ಆರಿಸುವಲ್ಲಿ, ಆತನ ಸಂಬಂಧಿಕರಿಗೆ ಎಳ್ಳಷ್ಟೂ ಅವಕಾಶ ಕೊಡುವುದಷ್ಟೇ ಅಲ್ಲ, ಸಂಬಂಧಿಕರು ಮಠದ ಪೀಠಕ್ಕೆ ಬಾರದಂತೆ ಅವರ ಯಾದಿಯನ್ನು ತಯಾರಿಸಿ ಅವರ ಅನರ್ಹತೆಯನ್ನು ಪ್ರಕಟಿಸಬೇಕು. ಗುಣ, ಶಿಕ್ಷಣ, ಯೋಗ್ಯತೆಯ ಮೇಲೆ ಜಂಗಮನ ಚುನಾವಣೆ ನೈತಿಕ ಮಟ್ಟದಲ್ಲಿ ನಡೆಯುವುದು ಅಗತ್ಯ. ಮಂಡಲ ಚುನಾವಣೆಗಾಗಿ ಕಣಕ್ಕಿಳಿದಂತಹ ಮನೋವೃತ್ತಿಗಿಳಿಯದೆ, ಧಾರ್ಮಿಕ, ನೈತಿಕ ಹೊಣೆಗಾರಿಕೆ, ಸಾಮರ್ಥ್ಯಗಳ ಮೇಲೆ ನಮ್ಮ ಜಂಗಮನು ಚುನಾಯಿತನಾಗಿ ಬಂದು ಅನಾರೋಗ್ಯದಿಂದ ಬಳಲುತ್ತಿರುವ ಲಿಂಗಾಯತ ಧರ್ಮದ ಕ್ಷೇಮಾಭಿವೃದ್ಧಿಯನ್ನು ಸಾಧಿಸಬೇಕಾಗಿದೆ.

## ಸಹಾಯಕ ಬರಹಗಳು


೧. ಎಂ.ಚಿದಾನಂದಮೂರ್ತಿ, ``ಜಂಗಮ ಜಾತಿಯಲ್ಲಿ ಅನುಶ್ರೇಣಿ'', ಸಾಧನೆ, ಸಂಪುಟ ೧೩, ಸಂಚಿಕೆ ೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೪ ಪುಟಗಳು ೩-೫೯

೨. ಎಂ.ಎಂ.ಕಲಬುರ್ಗಿ, `ಜಂಗಮ', ಮಾರ್ಗ, ಸಂಪುಟ ೧, ನರೇಶ ಮತ್ತು ಕಂಪನಿ, ಬೆಂಗಳೂರು ೧೯೮೮ ಪುಟಗಳು ೨೮೭-೨೮೯.

೩. ಎಂ.ಎಂ.ಕಲಬುರ್ಗಿ, ಶಾಸನಗಳಲ್ಲಿ ಶಿವಶರಣರು, ತೋಂಟದಾರ್ಯಮಠ, ಗದಗ, ೧೯೬೧

೪. ಹಿರೇಮಲ್ಲೂರ ಈಶ್ವರನ್, ಲಿಂಗಾಯತ ಧರ್ಮ, ಸಂಸ್ಕೃತಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೮೨

೫. ಹಿರೇಮಲ್ಲೂರ ಈಶ್ವರನ್, ಬಸವಣ್ಣ ಮತ್ತು ಲಿಂಗಾಯತ ಧರ್ಮ, ಕರ್ನಾಟಕ ವಿಶ್ವವಿದ್ಯಾಲಯ,ಧಾರವಾಡ,೧೯೮೯.

೬. ಡೇವಿಡ್ ಎಸ್. ಲಾರೆಂಜೆನ್, ಕಾಪಾಲಿಕರು ಮತ್ತು ಕಾಳಾಮುಖರು, ಅಸ್ತಂಗತವಾದ ಎರಡು ಶೈವಪಂಗಡಗಳು, ಕ್ಯಾಲಿ ಫೋರ್ನಿಯಾ ಪ್ರೆಸ್, ಬರ್ಕಲಿ, ೧೯೭೨.

೭. ಶಿವಗಣ ಪ್ರಸಾದಿ ಮಹಾದೇವಯ್ಯ, ಶೂನ್ಯ ಸಂಪಾದನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೧.

# ಮಂಟಪಮಾಲೆ

## ೨೨

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ. ಜೊತೆಗೆ ನಮ್ಮ ಉದ್ದೇಶಕ್ಕೆ ಪೂರಕವಾಗಿರುವ ಪುಸ್ತಿಕೆಗಳನ್ನೂ ಈ ಮಾಲೆಯಲ್ಲಿ ಪ್ರಕಟಿಸಿ ಜನರಿಗೆ ತಲುಪಿಸುತ್ತಿದ್ದೇವೆ. ಕೃತಿಯ ಲೇಖಕರಾದ ಡಾ. ಹಿರೇಮಲ್ಲೂರ ಈಶ್ವರನ್ ಅವರು ಯಾರ್ಕ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಅವರ 'ಜಂಗಮ' ಕೃತಿಯನ್ನು ಈ ಮಂಟಪಮಾಲೆಯಲ್ಲಿ ಪ್ರಕಟಿಸಲು ನಮಗೆ ಸಂತೋಷವಾಗುತ್ತದೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು